


# ಮಾಧ್ಯಮ್

ಸಂಸ್ಕೃತಿ, ಸಂವಹನ ಮತ್ತು ಅಭಿವೃದ್ಧಿ ಕುರಿತು ವಿಚಾರಗಳು

ಮಾಧ್ಯಮಗಳು ಮತ್ತು ಜಾಗತೀಕರಣ

ಮಕ್ಕಳ ಹಕ್ಕುಗಳು

## ಮಾಧ್ಯಮ್ ಪತ್ರಿಕೆಯ ಆಯ್ದ ಲೇಖನಗಳು

# ಮಾಧ್ಯಮ್

## ಪರಿವಿಡಿ




**ಮೂಲ ಇಂಗ್ಲಿಷ್ ಲೇಖನಗಳನ್ನು ಕನ್ನಡಕ್ಕೆ ಅನುವಾದಿಸಿದವರು**

ಎನ್. ವಿಶ್ವನಾಥ್, ವಾಸುದೇವ ಶರ್ಮಾ, ಎನ್. ಲಕ್ಷ್ಮಿ, ಡಿ.ಜಿ. ಸುಮತಿ

**ಚಿತ್ರ ಮತ್ತು ವಿನ್ಯಾಸ : ಜಯಂತಿ ಮನೋಕರನ್**

*ಖಾಸಗೀ ಪ್ರಸಾರಕ್ಕಾಗಿ*

ಪ್ರಕಾಶಕರು:

**ಮಾಧ್ಯಮ್**

ನಂ.1, 10ನೇ ಅಡ್ಡರಸ್ತೆ, 10ನೇ ಮುಖ್ಯರಸ್ತೆ, ವಸಂತನಗರ, ಬೆಂಗಳೂರು -

ದೂ. : 2281983, 2259766 ಫ್ಯಾಕ್ಸ್ : 2256985

E-mail : madhyamb@vsnl.com

http://www.madhyam.org

Printed at: Prakruti Mudrana No.51, 9th Main R
B.S.K. IInd Stage,B-Lore.70 Ph:6713894.


# ನಿಮ್ಮೊಡನೆ...

ನಮ್ಮೆದುರು ನೂರಾರು ಸಾಮಾಜಿಕ ವಿಚಾರಗಳಿವೆ. ಅವುಗಳನ್ನು ಎದುರಿಸಲು, ನಿವಾರಿಸಲು ಹಲವಾರು ಮಂದಿ ವ್ಯಕ್ತಿಗತವಾಗಿ, ಸಾಂಘಿಕವಾಗಿ ಪ್ರಯತ್ನಗಳನ್ನು ನಡೆಸಿದ್ದಾರೆ. ಸಮಸ್ಯೆಗಳೊಡನೆ ಸಮಾಜದಲ್ಲಿ ಮುಖಾಮುಖಿ ನಡೆಸುತ್ತಿರುವವರು ಸ್ವಯಂಸೇವಾ ಸಂಘಟನೆಗಳು. ದೇಶದ ಅಭಿವೃದ್ಧಿ, ಸೋಲು, ಸಾಧ್ಯತೆಗಳ ಬಗ್ಗೆ ಅಧ್ಯಯನ ನಡೆಸಿ ರೂಪುರೇಶಗಳು, ಬೆಳವಣಿಗೆಗಳನ್ನು ಕುರಿತು ತಮ್ಮ ಚಿಂತನೆಗಳನ್ನು ದಾಖಲಿಸುವ ಶೈಕ್ಷಣಿಕ ರಂಗದವರು ಒಂದು ಕಡೆಯಾದರೆ, ಪತ್ರಿಕಾರಂಗದವರ ಪಾತ್ರ ಇನ್ನೊಂದು ರೀತಿಯದು. ಹಲವು ಹತ್ತಾರು ಮೂಲಗಳಿಂದ ವಿಚಾರ ಸಂಗ್ರಹ ಮಾಡಿ ಪ್ರಸ್ತುತ ಚರಿತ್ರೆಯ ದಾಖಲೆಯೊಡನೆ ತಮ್ಮ ದೃಷ್ಟಿ, ವಿಚಾರ ಧಾರೆಯನ್ನು ಅವರು ಹರಿಯ ಬಿಡುತ್ತಿದ್ದಾರೆ. ದೇಶದ ಪ್ರಗತಿ, ವಿಗತಿ, ಸಾಧನೆಗಳು ಸಾಧ್ಯವಾಗುವುದು ಸೂಕ್ತ ಕಾನೂನು, ನೀತಿ ನಿಯಮ ಅವುಗಳಿಗನುಗುಣವಾದ ಯೋಜನೆಗಳನ್ನು ರೂಪಿಸುವ ಜವಾಬ್ದಾರಿ ಹೊತ್ತಿರುವ ಜನರಿಂದ. ಇಂತಹ ವಿವಿಧ ಹಿನ್ನೆಲೆಯ ಜನರೆಲ್ಲರೂ ಒಂದೆಡೆ ಸೇರಿ ಪ್ರಗತಿಯ ದೃಷ್ಟಿಕೋನ ನಿರ್ಮಿಸಲು ನೆರವಾಗುವ ವೇದಿಕೆ 'ಮಾಧ್ಯಮ್'.

ಮಾಧ್ಯಮ್ ಹೊರತರುವ ಪತ್ರಿಕೆ ಅಭಿವೃದ್ಧಿ ಕ್ಷೇತ್ರದ ಹಲವಾರು ಆಯಾಮಗಳನ್ನು ಕುರಿತು ವಿಚಾರ ಪ್ರಚೋದಕವಾದ ಲೇಖನಗಳನ್ನು ಒಳಗೊಂಡಿದೆ. ಈ ಪತ್ರಿಕೆ ಗ್ರಂಥಾಲಯಗಳು, ಶಿಕ್ಷಣ ಸಂಸ್ಥೆಗಳು, ವಿದ್ಯಾರ್ಥಿಗಳು, ನೀತಿ ನಿಯಮಗಳನ್ನು ರೂಪಿಸುವವರು, ಸ್ವಯಂ ಸೇವಾ ಸಂಸ್ಥೆಗಳು, ಪತ್ರಿಕಾಲಯಗಳಿಗೆ ತಲುಪುತ್ತಿದೆ.

ಮಾಧ್ಯಮ್ ತನ್ನ ಎಲ್ಲ ಸಾಮಗ್ರಿಗಳನ್ನು ಇಂಗ್ಲಿಷ್ ಭಾಷೆಯೊಂದಿಗೆ ಕನ್ನಡದಲ್ಲೂ ತರುವ ಪ್ರಯತ್ನ ನಡೆಸಿದೆ. ಆದರೆ 'ಮಾಧ್ಯಮ್ ಪತ್ರಿಕೆ' ಮಾತ್ರಾ ಇಂಗ್ಲಿಷ್‌ನಲ್ಲೇ ಬರುತ್ತಿದ್ದು ಕನ್ನಡದಲ್ಲಿ ಓದುವ ಅಭಿವೃದ್ಧಿ ಕಾರ್ಯಕರ್ತರಿಗೆ ತಲುಪುತ್ತಿಲ್ಲ ಎಂಬ ಆಕ್ಷೇಪಣೆ ಸಾಕಷ್ಟು ಕಾಲದಿಂದ ಇದೆ. ಆ ತಪ್ಪನ್ನು ಸರಿಪಡಿಸಿಕೊಳ್ಳುವ ಯತ್ನ ಈ ಸಂಚಿಕೆ. ಈ ಹಿಂದೆ 'ಮಾಧ್ಯಮ್' ಪತ್ರಿಕೆಯಲ್ಲಿ ಪ್ರಕಟವಾಗಿರುವ ಕೆಲವು ಆಯ್ದ ವಿಶೇಷ ಲೇಖನಗಳನ್ನು ಅನುವಾದಿಸಿ ನಿಮ್ಮ ಮುಂದೆ ಇಡುತ್ತಿದ್ದೇವೆ. ... ಮಗಳು ; ಎಚ್.ಐ.ವಿ./ ... ಮಕ್ಕಳ ಹಕ್ಕುಗಳನ್ನು

... ಅಭಿಪ್ರಾಯಗಳನ್ನು ... ಶ್ನೆಗಳು ಹಾಗೂ ... ಚ್ಚಿನ ಮೌಲ್ಯ ತರಲು

- ಮುನಿರಾ ಸೇನ್

... ವಾಸುದೇವ ಶರ್ಮಾ

# ಜಾಗತೀಕರಣ, ಮಾಧ್ಯಮಗಳು ಮತ್ತು ಸಮಾಜದ ಮೇಲೆ ಅದರ ಪ್ರಭಾವ

- ಎನ್.ರಾಮ್

## ಜಾಗತೀಕರಣ, ಉದಾರೀಕರಣ ಮತ್ತು ಬಡತನ

ಮಾಧ್ಯಮಗಳ ಮೇಲೆ ಜಾಗತೀಕರಣದ ಪ್ರಭಾವ ಏನು ಎಂದು ನಮಗೆಲ್ಲರಿಗೂ ಆಸಕ್ತಿಯಿದೆ. ಆದರೆ ಮೊದಲಿಗೆ ಜಾಗತೀಕರಣ ಪ್ರಕ್ರಿಯೆ ಕುರಿತು ನಮ್ಮ ನಿಲುವನ್ನು ವಿಶದೀಕರಿಸಿಕೊಳ್ಳಬೇಕು. ಜಾಗತೀಕರಣವನ್ನು ಸುತ್ತುವರಿದಿರುವ ಎಲ್ಲ ವಿಷಯಗಳ ಬಗ್ಗೆ ಭಾರತೀಯರ, ಕಡೆಯ ಪಕ್ಷ ಇಲ್ಲಿಯ ವಿದ್ಯಾವಂತರ ಅಭಿಪ್ರಾಯಗಳು ಧ್ರುವೀಕರಣ ಆಗಿವೆಯೆಂದು ನಾನು ಒಪ್ಪುತ್ತೇನೆ: 1991 ರಿಂದಲೂ, ಜಾಗತೀಕರಣ ಪ್ರಕ್ರಿಯೆಯ ಸಮರ್ಥಕರು, ಪ್ರತಿಪಾದಕರು ಮತ್ತು ಇದನ್ನು ಸಮರ್ಥಿಸುವ ನಾಯಕರು ಜಾಗತೀಕರಣದ ಉದ್ದೇಶಗಳಿಗೆ, ಅದರಲ್ಲಿಯೂ ಆರ್ಥಿಕ ಸುಧಾರಣಾ ಕ್ಷೇತ್ರದಲ್ಲಿನ ಉದ್ದೇಶಗಳಿಗೆ ಬಾಯಿ ಮಾತಿನ ಸಹಾನುಭೂತಿ ತೋರುತ್ತಾ ಬಂದಿದ್ದಾರೆ. ಇವರೆಲ್ಲರೂ ಜನಸಾಮಾನ್ಯರ ಬಡತನ ಮತ್ತು ಜೀವನಾವಶ್ಯಕ ವಸ್ತುಗಳ ಅಭಾವ, ಸಾಮಾಜಿಕ ನ್ಯಾಯ, ಕಡುಬಡವರ ಬಗ್ಗೆ ಗಮನ ಇತ್ಯಾದಿಗಳ ಕುರಿತು ತಮಗೆ ಬದ್ಧತೆಯಿದೆ ಎಂದು ಹೇಳಿಕೊಳ್ಳುತ್ತಾರೆ. ಜಾಗತೀಕರಣ ನಮ್ಮ ಆರ್ಥಿಕ ಸಮಸ್ಯೆಗಳಿಗೆ ರಾಮಬಾಣ, ಬಡತನ ನಿರ್ಮೂಲನಕ್ಕೆ ಸುಧಾರಣೆಗಳು ಏಕ ಮಾತ್ರ ಮಾರ್ಗ ಎಂದು ಹೇಳುತ್ತಿದ್ದರೂ ಕಣ್ಣಿಗೆ ಕಾಣುವ ಪುರಾವೆಗಳು ಕಳವಳ ಹುಟ್ಟಿಸುತ್ತವೆ ಎಂದೆನಿಸುತ್ತದೆ ನನಗೆ. ಇದನ್ನೇ ಕುರಿತು ನಾನು ಲಂಬಿಸುವುದಿಲ್ಲ, ಎಲ್ಲ ಕಾಳಜಿಗಳನ್ನು ಒಟ್ಟಾರೆಯಾಗಿ ಎತ್ತಿಕೊಂಡು, ವಿವಿಧ ಅಭಿಪ್ರಾಯಗಳನ್ನು ಬೊಟ್ಟುಮಾಡಿ ತೋರಿಸುತ್ತೇನೆ ಅಷ್ಟೆ. ಜಾಗತೀಕರಣದಿಂದ ಅಧಿಕಾರಯುತವಾಗಿ ಇಳಿದುಬಂದ ಉದಾರೀಕರಣ, ಮಾರುಕಟ್ಟೀಕರಣ, ಖಾಸಗೀಕರಣ ಇವೆಲ್ಲವೂ ಅದೇ ಪ್ರಕ್ರಿಯೆಯ ಅಂಶಗಳೇ, ಅಥವಾ ಕನಿಷ್ಠಪಕ್ಷ ಜಾಗತೀಕರಣವೆಂಬ ವಿಸ್ತೃತ ಯೋಜನೆಯ ಸಂಬಂಧಿಗಳೇ.




ಜಾಗತೀಕರಣ ಪ್ರಶ್ನೆಯನ್ನು ಹಲವಾರು ವೇದಿಕೆಗಳಲ್ಲಿ ಎತ್ತಲಾಗಿದ್ದು, ಕಂಡುಬಂದ ಪುರಾವೆಗಳು ಕಳವಳಕಾರಿಯಾಗಿವೆ. ವಿಶ್ವ ಬ್ಯಾಂಕ್ (World Bank) ಮತ್ತು ಅಂತಾರಾಷ್ಟ್ರೀಯ ಹಣಕಾಸು ನಿಧಿ (IMF), ಅದರಲ್ಲಿಯೂ ವಿಶೇಷವಾಗಿ IMF, ಈ ಕಾರ್ಯಕ್ರಮಗಳಿಂದ ಸರಿಸುಮಾರು ಎಪ್ಪತ್ತು ಕಡಿಮೆ ಅಭಿವೃದ್ಧಿಗೊಂಡ ರಾಷ್ಟ್ರಗಳಲ್ಲಿ ಸ್ಥಿರೀಕರಣ ಮತ್ತು ಸಂರಚನಾ ಹೊಂದಾಣಿಕೆ ಕಾರ್ಯಕ್ರಮಗಳ (Structural Adjustment Programme) ಪ್ರಭಾವ ಕುರಿತು ವಿರೋಧಾಭಾಸಗಳಿಂದ ಕೂಡಿದ ಸಾಕಷ್ಟು ಸಾಹಿತ್ಯವನ್ನು ಹೊರತಂದಿವೆ. ಈ ಕಾರ್ಯಕ್ರಮಗಳ ಪ್ರಭಾವ ಒಂದೊಂದು ದೇಶದಲ್ಲಿ ಒಂದೊಂದು ತೆರನಾಗಿದೆ, ಆದರೆ ಕೆಲವು ದೇಶಗಳಲ್ಲಿ 80ರ ದಶಕದಲ್ಲಿ ಕಂಡು ಬಂದ ಪುರಾವೆಗಳು ಗಂಭೀರವಾಗಿ ಕಳವಳಕಾರಿಯಾಗಿವೆ. ಸ್ಥಿರೀಕರಣ ಮತ್ತು ಸಂರಚನಾ ಹೊಂದಾಣಿಕೆ ಕಾರ್ಯಕ್ರಮಗಳನ್ನು (SAPs) ಎಪ್ಪತ್ತಕ್ಕೂ ಹೆಚ್ಚು ದೇಶಗಳ ಮೇಲೆ ಮುಖ್ಯವಾಗಿ ಲ್ಯಾಟಿನ್ ಅಮೇರಿಕಾ ಮತ್ತು ಆಫ್ರಿಕಾಗಳಲ್ಲಿ ಹೇರಲಾಯ್ತು, ಅದರಿಂದ ಅಲ್ಲಿಯ ಬಡವರ ಮೇಲೆ ವಿಪರೀತ ದುಷ್ಪರಿಣಾಮವಾಯಿತು. ಪೂರ್ವ ಮತ್ತು ಮಧ್ಯ ಯೂರೋಪಿನ ಆಗಿನ ಸಮಾಜವಾದಿ ದೇಶಗಳನ್ನು, ಲ್ಯಾಟಿನ್ ಅಮೆರಿಕಾ ಮತ್ತು ಸಬ್ ಸಹಾರನ್ ಆಫ್ರಿಕಾ ದೇಶಗಳಲ್ಲಿ SAP ಗಳನ್ನು ನೋಡಿದಾಗ ಅಲ್ಲೆಲ್ಲ ವಾಸ್ತವ ಗಳಿಕೆ ಮತ್ತು ಮಜೂರಿ ಅಂಶ ಬಿದ್ದು ಹೋಗಿರುವ ತೀವ್ರ ಕಳವಳಕಾರಿ ಚಿತ್ರವೇ ಕಣ್ಮುಂದೆ ಕಟ್ಟುತ್ತದೆ. ಉದಾಹರಣೆಗೆ 1980 ಮತ್ತು 1989ರ ನಡುವೆ ಸಬ್ ಸಹಾರನ್ ಆಫ್ರಿಕಾದಲ್ಲಿ ತಲಾವಾರು ಒಟ್ಟು ದೇಶೀಯ ಉತ್ಪನ್ನ (GDP) ಐದನೇ ಒಂದು ಭಾಗದಷ್ಟು ಕುಸಿದಿತ್ತು. ನನ್ನ ದೃಷ್ಟಿಯಲ್ಲಿ, ಸ್ಥಿರೀಕರಣ ಮತ್ತು ಸಂರಚನಾ ಹೊಂದಾಣಿಕೆ ಕಾರ್ಯಕ್ರಮಗಳ ಪ್ರಭಾವಗಳಿಗೆ ಸಿಲುಕಿದ ವಿಶಿಷ್ಟ ಪ್ರಕರಣವೆಂದರೆ ಮೆಕ್ಸಿಕೋ, ಏಕೆಂದರೆ ಅಲ್ಲಿ ಸಮಸ್ಯೆಗಳೇ

ತುಂಬಿದ್ದವು. ಕೆಲವು ಕ್ಷೇತ್ರಗಳಲ್ಲಿ ಸಮಸ್ಯೆಗಳನ್ನು ಬಿಡಿಸಿಕೊಂಡು ಪಾರಾಗಿದ್ದರೂ, ಇಲ್ಲಿಯ ದುಡಿಯುವ ವರ್ಗದ ಜನ ಈ ಕಾರ್ಯಕ್ರಮಗಳಿಗೆ ತುಂಬ ಬೆಲೆ ತೆತ್ತು ಪೆಟ್ಟು ತಿಂದಿದ್ದಾರೆ. 1983 ಮತ್ತು 1988 ರ ನಡುವೆ ವಾಸ್ತವ ಮಜೂರಿಯಲ್ಲಿ ವಿಪರೀತ ಇಳಿಕೆ - ಮಜೂರಿ ಆದಾಯ ಮತ್ತು ಒಟ್ಟು ಆದಾಯದಲ್ಲಿ ಹಟಾತ್ತಾದ ಕಡಿತ ; ವ್ಯವಸಾಯೋತ್ಪನ್ನಗಳು ಕುಗ್ಗಿದ್ದು ; ನಗರಗಳಲ್ಲಿ ಮುಕ್ತ ಉದ್ಯೋಗಗಳಿಗೆ ಸೇರುವುದರಲ್ಲಿ ಕಡೆಯ ಪಕ್ಷ ಆರಂಭಿಕ ವರ್ಷಗಳಲ್ಲಿ ತೀವ್ರ ಏರಿಕೆ ; ಈ ಅವಧಿಯಲ್ಲಿ ಅಸಮಾನತೆ ಸ್ಪಷ್ಟವಾಗಿ ಕಾಣುವಂತೆ ಹದಗೆಟ್ಟಿದ್ದು; ಮತ್ತು ವಿವಿಧ ಸಾಮಾಜಿಕ ವರ್ಗಗಳ ಮೇಲೆ ಸಂರಚನಾ ಹೊಂದಾಣಿಕೆಯಿಂದ ಬಿದ್ದ ಪ್ರಭಾವದಲ್ಲಿ ವಿಪರೀತ ಏರುಪೇರು. ಈ ಪ್ರಭಾವಗಳನ್ನು ಗುರುತಿಸಿರುವವರು ವಾಮಪಂಥೀಯ ಟೀಕಾಕಾರರು ಮತ್ತು ಸಂರಚನಾ ಹೊಂದಾಣಿಕೆ ಹಾಗೂ ಸ್ಥಿರೀಕರಣ ತಂತ್ರದ ವಿರೋಧಿಗಳಷ್ಟೇ ಅಲ್ಲ ವಿಶ್ವ ಬ್ಯಾಂಕಿನ ಸಾಹಿತ್ಯವೇ ಇದನ್ನು



ಗುರುತಿಸಿದೆ. ಹಿಂದಿನ ಸೋವಿಯತ್ ಯೂನಿಯನ್ ಮತ್ತು ಪೂರ್ವ ಯೂರೋಪಿನ ಸಮಾಜವಾದಿ ದೇಶಗಳಲ್ಲಿ ಏನಾಯ್ತೆಂದು ನೋಡಿದರೆ ಅಲ್ಲಿಯ ಚಿತ್ರ ತೀವ್ರ ಆತಂಕಕಾರಿಯಾಗಿದೆ. ರಾಜಕೀಯ ಪರಿಣಾಮಗಳಲ್ಲಿಯೂ ಇದು ಪ್ರತಿಫಲಿಸಿದೆ; 5 ಅಥವಾ 6 ವರ್ಷಗಳ ಹಿಂದೆಯಷ್ಟೆ ತುಂಬ ಜನಪ್ರಿಯರಾಗಿದ್ದವರನ್ನು ಜನ ಅಧಿಕಾರದಿಂದ ಕಿತ್ತೆಸೆದಿದ್ದಾರೆ, ಅದಕ್ಕೆ ಮುಖ್ಯ ಕಾರಣ ಹೇಗೆ ನೋಡಿದರೂ ತೀವ್ರ ಹಿಂದುಳಿದಿವೆ ಅಥವಾ ಅಭಿವೃದ್ಧಿಯನ್ನೇ ಹೊಂದಿಲ್ಲ ಎಂದೇನೂ ಹೇಳಲಾಗದ ಆ ದೇಶಗಳ ಜನರ ಜೀವನೋಪಾಯಕ್ಕೆ, ಜೀವನ ಮಟ್ಟಗಳಿಗೆ, ಜನಸಾಮಾನ್ಯರ ಜೀವನದ ಗುಣಮಟ್ಟಕ್ಕೆ ಎಂಥ ಧಕ್ಕೆ ತಗುಲಿತು ಎಂಬುದು. ಸ್ವತಂತ್ರ ಭಾರತದ ಸಾಧನೆಗಳನ್ನು ವಿಮರ್ಶಿಸಿ ಹೇಳಲು ಆಹ್ವಾನಗೊಂಡ ಅರ್ಥಶಾಸ್ತ್ರಜ್ಞ ಅಮರ್ತ್ಯ ಸೇನ್‌ರವರೂ ಸಹ ಕೆಲವು ನಿಯಂತ್ರಣಗಳನ್ನು ತೆಗೆದು ಹಾಕಿರುವುದಕ್ಕೆ ವಿರೋಧವಾಗಿದ್ದಾರೆ. ಪ್ರಜಾಪ್ರಭುತ್ವವನ್ನು ಮತ್ತು ಪ್ರಜಾತಂತ್ರಾತ್ಮಕ ಸಂಸ್ಥೆಗಳನ್ನು ಕಾಪಾಡಿಕೊಂಡು ಬಂದಿರುವುದು ಭಾರತದ ದೊಡ್ಡ ಸಾಧನೆ ಎಂದು ಎತ್ತಿ ತೋರಿಸಿರುವ ಅವರು, ಅಸಮಾನತೆ ಇನ್ನೂ ಉಳಿದ್ದಿರುವುದು ಈ ದೇಶದ ಅತಿ ದೊಡ್ಡ ಸೋಲು ಎನ್ನುತ್ತಾರೆ. ಭಾರತದಲ್ಲಿ ಉದಾರೀಕರಣ ನೀತಿಯಿಂದಾಗಿ ಉಂಟಾದ ಆರಂಭಿಕ ಪ್ರಭಾವವನ್ನು ಕುರಿತಾಗಿ ಅವರು ವಿಶೇಷವಾಗಿ ಆತಂಕ ವ್ಯಕ್ತಪಡಿಸಿದ್ದಾರೆ. ಉದಾರೀಕರಣದ ಅನುಕೂಲಗಳು ಭಾರತದ ಜನಕೋಟಿಯ ಅತಿ ದುರ್ಬಲ ವರ್ಗಗಳಿಗೆ ತಲುಪಿಲ್ಲವೆಂದು ಅವರು ಗುರುತಿಸಿದ್ದಾರೆ. ಇದೇ ಪರಿಸ್ಥಿತಿ ಮುಂದುವರಿದಿದೆ. ಇದು ಭಾರತದಲ್ಲಿ ಸರ್ಕಾರದ ನೀತಿಯ ಅತ್ಯಂತ ದೊಡ್ಡ ಅಥವಾ ಅತ್ಯಂತ ಗಂಭೀರ ಸೋಲು. ಜವಹರ್‌ಲಾಲ್ ನೆಹರೂರವರು ತಮ್ಮ 'ವಿಧಿಯೊಂದಿಗೆ ಗೊತ್ತುಪಾಡು' ಭಾಷಣದಲ್ಲಿ ನೀಡಿದ ಭರವಸೆ (ಬಡತನ ಮತ್ತು ಅಜ್ಞಾನ ಮತ್ತು ಅವಕಾಶಗಳ ಅಸಮಾನತೆಯನ್ನು ಕೊನೆಗಾಣಿಸುತ್ತೇವೆಂಬ ಭರವಸೆ) ಸುಳ್ಳಾಗಿದೆ. ಇವತ್ತು 315 ರಿಂದ 320 ದಶಲಕ್ಷ ಜನ, 'ಬಡತನ ರೇಖೆ' ಎಂದು ಯಾವುದನ್ನು ಕರೆಯುತ್ತೇವೆಯೋ ಅದಕ್ಕಿಂತಲೂ ಕೆಳಗೆ ಜೀವಿಸುತ್ತಿದ್ದಾರೆಂದು ನಾವೇ ಮಾತನಾಡುತ್ತೇವೆ. ನೀವೀಗ ಆ ಹಳೆಯ ಲೈಸೆನ್ಸ್ ಮತ್ತು ಪರ್ಮಿಟ್ ರಾಜ್‌ಗೆ ಅಥವಾ ಅಧಿಕಾರಿಶಾಹಿಯ ನಿಯಂತ್ರಣಗಳ ವ್ಯವಸ್ಥೆಗೆ ಹಿಂದಿರುಗಬೇಕಾದುದೇನೂ ಇಲ್ಲ. ಆದರೇನು? ಈ ಉದಾರೀಕರಣ ಅಥವಾ ಜಾಗತೀಕರಣ ಪ್ರಕ್ರಿಯೆಯಿಂದಾಗಿ ಏನಿಲ್ಲವೆಂದರೂ ಇದರ ಆರಂಭಿಕ ವರ್ಷಗಳಲ್ಲಿ ಬಡತನ ರೇಖೆ ಎಂಬುದಕ್ಕಿಂತಲೂ ಕೆಳಗೆ ಇರುವವರ ಸಂಖ್ಯೆ ಏರಿದೆ ಎಂಬುದು ನಿಜ.

**ಜಾಗತೀಕರಣ ಮತ್ತು ಭಾರತದಲ್ಲಿನ ಎರಡು ಪ್ರಮುಖ ಮಾಧ್ಯಮ ಸಂಪ್ರದಾಯಗಳು**

ನಾವು ಈ ಸಂದರ್ಭದಲ್ಲಿ ಮಾಧ್ಯಮಗಳ ಸ್ಥಾನವೇನು ಎಂದು ನೋಡ ಹೊರಟಿದ್ದೇವೆ. ಭಾರತದಲ್ಲಿ ಕಡೆಯ ಪಕ್ಷ ಎರಡಾದರೂ ಪ್ರಮುಖ ಮಾಧ್ಯಮ ಸಂಪ್ರದಾಯಗಳು ನಡೆದು ಬಂದಿವೆ. ಬಹು ಸಾಂಸ್ಕೃತಿಕ ಸಿದ್ಧಾಂತವನ್ನು ಒಪ್ಪಿರುವ, ಸ್ವಲ್ಪ ಮಟ್ಟಿಗೆ ಸ್ವತಂತ್ರವಾಗಿರುವ ಪತ್ರಿಕೆಗಳು ; ಅವುಗಳಿಗೆ ತಮ್ಮದೇ ದೌರ್ಬಲ್ಯಗಳಿವೆ, ಹಿತಾಸಕ್ತಿಗಳ ತಿಕ್ಕಾಟವಿದೆ ಮತ್ತು ಹವ್ಯಾಸಗಳಿವೆ ಎಂಬುದು ನಿಜ. ಇದು ಭಾರತದಲ್ಲಿನ, ಮುಂಚಿನಿಂದಲೂ ಇರುವ ಮಾಧ್ಯಮ ಸಂಪ್ರದಾಯ. ಸರಿಯಾಗಿ ಹೇಳಬೇಕೆಂದರೆ ಕಡೆಯ ಪಕ್ಷ 150 ವರ್ಷಗಳಷ್ಟು ಹಳೆಯದು, ವೀರ್ಯವತ್ತಾದ ಚೇತನಾಪೂರ್ಣ ಸಂಪ್ರದಾಯವಾಗಿದ್ದು ರಾಜಕೀಯ ಕ್ಷೇತ್ರದಲ್ಲಿ ಮತ್ತು ಸಮಾಜ ಜೀವನದಲ್ಲಿ ಬದಲಾವಣೆ ತರುವಷ್ಟು ಶಕ್ತವಾದುದು. ಸ್ವಾತಂತ್ರ್ಯ ಬಂದ ಮೇಲೆ, 1950 ರಲ್ಲಿ ಜಾರಿಗೆ ಬಂದ ಭಾರತೀಯ ಸಂವಿಧಾನ ಇದಕ್ಕೆ ಬಹುವಾಗಿ ಬಲಗೊಡಿಸಿದೆ. ಸಂವಿಧಾನದ 19ನೇ ಪರಿಚ್ಛೇದದಿಂದ 'ಪತ್ರಿಕಾ ಸ್ವಾತಂತ್ರ್ಯ' ಇಳಿದು ಬಂದಿದೆ. ಭಾರತದಲ್ಲಿ ಪತ್ರಿಕಾ ಸ್ವಾತಂತ್ರ್ಯವೆಂದಾಗ ಅದರಲ್ಲಿ ಪರಿಚ್ಛೆದ 19(1) (a) ಮತ್ತು 19(1)(g) ಈ ಎರಡು ಸ್ವಾತಂತ್ರ್ಯಗಳು ಸೇರುತ್ತವೆ ಎಂದು ಸರ್ವೋಚ್ಚ ನ್ಯಾಯಾಲಯ ಎತ್ತಿ ಹೇಳಿದೆ. ಇಷ್ಟಾದರೂ,

ಸಂವಿಧಾನದಲ್ಲಿ ಎಲ್ಲಿಯೂ ಪತ್ರಿಕಾ ಸ್ವಾತಂತ್ರ್ಯವನ್ನು ವ್ಯಕ್ತವಾಗಿ ಹೇಳಿಲ್ಲ. ನ್ಯಾಯಾಲಯದ ವ್ಯಾಖ್ಯಾನದಿಂದಾಗಿ ಪತ್ರಿಕಾ ಸ್ವಾತಂತ್ರ್ಯಕ್ಕೂ ಮತ್ತು ಸ್ವಯಂ ಪತ್ರಿಕೆಗಳಿಗೂ ಒಂದು ರೀತಿಯ ಮರ್ಯಾದೆಯ ಪೀಠ ಸಿಕ್ಕಿದೆ.

ಇವತ್ತು ವ್ಯಾವಹಾರಿಕ ಪತ್ರಿಕೋದ್ಯಮ ತುಂಬ ಭ್ರಷ್ಟವಾಗಿ ಹೋಗಿದೆ. ಅಮರ್ತ್ಯ ಸೇನ್‌ರವರು ಆಗೊಮ್ಮೆ ಈಗೊಮ್ಮೆ ಬರೆದ ಲೇಖನವನ್ನು ಬಿಟ್ಟರೆ ಜಾಗತೀಕರಣದಿಂದ ಬಡವರು ಮತ್ತು ದುಡಿಯುವ ವರ್ಗದ ಮೇಲೆ ಆಗುತ್ತಿರುವ ಪ್ರಭಾವ ಕುರಿತ ವಾಚನಯೋಗ್ಯ ಗಂಭೀರ ಬರವಣಿಗೆ ಸಾಮಾನ್ಯವಾಗಿ ಅದರಲ್ಲಿ ಕಾಣಿಸುವುದೇ ಇಲ್ಲ. ಹಾಗೆ ನೋಡಿದರೆ ಸಾಮಾನ್ಯ ಪತ್ರಿಕೆಗಳು ಇವಕ್ಕಿಂತ ಮೇಲು, ಆದರೆ ಅವುಗಳಲ್ಲಿಯೂ ಮೌಲ್ಯಗಳು ಅತೀವ ಒತ್ತಡಗಳಡಿ ಸಿಲುಕಿ, ಆಘಾತಗಳಿಗೆ ಒಳಗಾಗಿ ನಲುಗುತ್ತಿವೆ. ಹೀಗೆಂದು ಅತ್ಯಂತ ದೂರದರ್ಶಿತ್ವವುಳ್ಳವರೂ ಅತ್ಯುತ್ತಮ ಅಧ್ಯಕ್ಷರೂ ಎಂದು ಹೆಸರಾದ ಜಸ್ಟಿಸ್ ಸಾವಂತ್ ತೋಡಾ ಅವರ ಅಧ್ಯಕ್ಷತೆ ಹೊಂದಿದ ಪ್ರೆಸ್ ಕೌನ್ಸಿಲ್ ಆಫ್ ಇಂಡಿಯಾ ತಾನೇ ಹೇಳುತ್ತದೆ. ಪ್ರೆಸ್ ಕೌನ್ಸಿಲ್ ಮೇಲೆ ಶಾಸನಗಳು ಹೇರುವ ಮಿತಿಗಳನ್ನು ದಾಟದೆಯೂ ಅದಕ್ಕೆ ನವಚೈತನ್ಯ ತುಂಬುವ ಪ್ರಯತ್ನ ತೋಡಾರವರಿಂದ ನಡೆದಿದೆ.



ಪತ್ರಿಕೋದ್ಯಮ ಸಮಸ್ಯೆಗಳಿಂದ ನರಳುತ್ತಿರುವುದು ನಿಜ. ಇದು ಜಾಗತಿಕ ದೌರ್ಬಲ್ಯ. ಪಾಶ್ಚಿಮಾತ್ಯ ದೇಶಗಳಲ್ಲಿ, ವಿಶೇಷತಃ ಅಮೆರಿಕೆಯ ಸಂಯುಕ್ತ ಸಂಸ್ಥಾನಗಳಲ್ಲಿ (US) ಇದನ್ನು ಚೆನ್ನಾಗಿ ಗಮನಿಸಿ, ವಿಶ್ಲೇಷಿಸಿ ವಿಮರ್ಶಿಸಲಾಗುತ್ತಿದೆ. ಪತ್ರಿಕೋದ್ಯಮದಲ್ಲಿ ಗಣನೀಯ ಅನುಭವ ಪಡೆದ, ಉದಾರ ವಿದ್ವಾಂಸ ಬ್ಯಾಗ್‌ಡಿಕಿಯಾನ್ (Bagdikian) ಹೇಳುವಂತೆ ಮಾಧ್ಯಮ ಬರುಬರುತ್ತಾ ಕೆಲವೇ ಕೆಲವರ ಕೈಹಿಡಿತಕ್ಕೆ ಒಳಗಾಗುತ್ತಾ ಬಂದಿದೆ. ಸಂಯುಕ್ತ ಸಂಸ್ಥಾನಗಳಲ್ಲಿ ಹಿಂದೆ ಒಂದು ಪಟ್ಟಣವೆಂದರೆ ಮೂರು ಮೂರು ವಾರ್ತಾ ಪತ್ರಿಕೆಗಳಿದ್ದ ಕಡೆ ಈಗ ಬಹುತೇಕ ಪಟ್ಟಣಗಳಲ್ಲಿ ಒಂದೊಂದೇ ಪತ್ರಿಕೆ ಇದೆ. ಈಗ ವೃತ್ತಪತ್ರಿಕೆಗಳ ಸಮೂಹಗಳು ಮತ್ತು ಅವುಗಳದೇ ಮೇಲುಗೈಯ್ಯಾಟವಾಗಿದ್ದು ಅವರ ಸಂಖ್ಯೆ ಸುಮಾರು ಐವತ್ತರಷ್ಟಕ್ಕೆ ಇಳಿದು ಹೋಗಿದೆ.

ಬೇರೆ ವಿಚಾರಗಳನ್ನೂ ಹೇಳುತ್ತಾ ಬ್ಯಾಗ್‌ಡಿಕಿಯಾನು ಈಗಾಗಲೇ ಸ್ಪಷ್ಟವಾಗಿ ಸಮರ್ಥನೆಗೊಂಡಿರುವ ವಾಸ್ತವವನ್ನು ವಿಮರ್ಶಿಸುತ್ತಾ ಹೀಗೆ ಹೇಳಿದ್ದಾರೆ - ''ವಿಶ್ವ ಗ್ರಾಮದ ಪ್ರಭುಗಳಿಗೆ ತಮ್ಮದೇ ಆದ ರಾಜಕೀಯ ಅಜೆಂಡಾಗಳಿವೆ. ಅವರ ಸ್ವಂತದ ಹಣಕಾಸಿನ ಹಿತಾಸಕ್ತಿಗಳನ್ನು ಬೆಂಬಲಿಸದ ಆರ್ಥಿಕ ಬದಲಾವಣೆಗಳನ್ನು ಅವರೆಲ್ಲರೂ ನಿರಾಕರಿಸಿ ವಿರೋಧಿಸುತ್ತಾರೆ.'' ಬ್ಯಾಗ್‌ಡಿಕಿಯಾನ್ ಹೇಳಿದ ಮುಕ್ತಾಯದ ಮಾತುಗಳು ನಡುಕ ಹುಟ್ಟಿಸುವಂತಿವೆ: ''ಕೂಡಿಕೊಂಡು ಅವರೆಲ್ಲರೂ ಇತಿಹಾಸದಲ್ಲಿ ಹಿಂದೆಂದೂ ಕಾಣದಂತಹ ದೊಡ್ಡ ಜನಕೋಟಿಗಳ ಮೇಲೆ ಪ್ರಭಾವ ಬೀರುವ ಹಾಗೆ ವಿಚಾರಗಳು, ಸಂಸ್ಕೃತಿ ಮತ್ತು ವಾಣಿಜ್ಯಗಳನ್ನು ತಮ್ಮ ಏಕೀಭವಿಸಿದ ಬಲದಿಂದ ಮುಟ್ಟುತ್ತಾರೆ.'' ಮುರ್ಡೋಚ್ (Murdoch) ವಿಷಯಕ್ಕೆ ಬ್ಯಾಗ್‌ಡಿಕಿಯಾನ್ ಅವನನ್ನು ''ಪ್ರಪಂಚದಲ್ಲಿ ಕೊಲೆ-ಮತ್ತು-ಮೊಲೆಗಳ ಪತ್ರಿಕೋದ್ಯಮದ ಪ್ರಮುಖ ಸರಬರಾಯಿಗಾರ'' ಎಂದು ಚಿತ್ರಿಸುತ್ತಾನಲ್ಲದೆ ಅವನ ವಿಧಾನಗಳ ಮೇಲೆ ಬೆಳಕು ಚೆಲ್ಲುವ ಹಲವಾರು ಸಂಗತಿಗಳನ್ನು ತಿಳಿಸುತ್ತಾನೆ. ಉದಾಹರಣೆಗೆ, 1969ರಲ್ಲಿ ಅವನು ಖರೀದಿಸಿದ 'ದಿ ಸನ್' (The Sun) ಪತ್ರಿಕೆಗೂ ಮತ್ತು ಆ ನಂತರ ಖರೀದಿಸಿದ 'ದಿ ಟೈಮ್ಸ್' (The Times) ಪತ್ರಿಕೆಗೂ ಏನು ಮಾಡಿದ ಗೊತ್ತೆ?

''ಮುರ್ಡೋಚ್ ಕಾಮಪ್ರಚೋದಕ ಪತ್ರಿಕೋದ್ಯಮವನ್ನು ಪಕ್ಕಾ ಮಾಡಿ ಓದುಗರನ್ನು ತನ್ನ ಬಲೆಗೆ ಕೆಡವಿಕೊಂಡ, ಈಗ ಅದು ಅವನ ಬಹುತೇಕ ಎಲ್ಲ ಪ್ರಕಟಣೆಗಳ ಮಾನದಂಡವಾಗಿ ಹೋಗಿದೆ, ಅವೆಲ್ಲದರಲ್ಲಿಯೂ ಮೈನವಿರೇಳಿಸುವ ತಲೆಬರಹಗಳಡಿ ಘೋರ ಅಪರಾಧಗಳ ಕತೆಗಳು ಮತ್ತು ಮೂರನೆ ಪುಟದಲ್ಲಿ ತೆರೆದೆದೆಯನ್ನು ತೋರಿಸುತ್ತಾ ಪುಟದಿಂದಾಚೆ ಜಿಗಿದು ಬರುವಂತಹ ಪ್ರಮದೆಯರ ಲೈಂಗಿಕವಾಗಿ ಆಕರ್ಷಕವಾದ ಚಿತ್ರಗಳು ಜೊತೆಜೊತೆಗೇ ಇರುತ್ತವೆ. ಘನಗಾಂಭೀರ್ಯದ ಟೈಮ್ಸ್ ಮತ್ತು ಲಂಡನ್ನಿನ 'ಸಂಡೇ ಟೈಮ್ಸ್' ಕೂಡ ಇದಕ್ಕೆ ಹೊರತಾಗಲಿಲ್ಲ. 1981ರಲ್ಲಿ ಇವು ಮುರ್‌ಡೋಚ್ ವಶಕ್ಕೆ ಬಂದ ಮೇಲೆ ಚಕ್ಕಳಗುಳಿಯಿಡುವ ಸೂತ್ರವನ್ನು ಪಾಲಿಸದೆ ತಡಮಾಡುತ್ತಿದ್ದಾಗ, ಹೆಚ್ಚು ಲೈಂಗಿಕ ವಿಷಯಗಳು ಬೇಕು ಎಂದು ಒತ್ತಾಯಿಸುವ ಒಂದು ಪತ್ರ ಪ್ರಕಟಗೊಂಡಿತು. ಅದರ ಮಾರನೆಯ ದಿನವೇ ದಿ ಟೈಮ್ಸ್‌ನಲ್ಲಿ ''ಲೈಂಗಿಕ ಕ್ಲಬ್‌ಗೆ ನನ್ನನ್ನು ನಾನೇ ಮಾರಿಕೊಂಡಿದ್ದಾದರೂ ಹೇಗೆ'' ಎಂಬ ತಲೆಬರಹ ಮುದ್ರಿತವಾಯ್ತು. ನೀವೇನಾದರೂ ರೂಪರ್ಟ್ ಮುರ್ಡೋಚ್‌ಗೆ ಭಾರತೀಯ ಪತ್ರಿಕೆಗಳ ಒಳಕ್ಕೆ ಪ್ರವೇಶ ನೀಡಿದಿರೋ ತುಂಬ ದೊಡ್ಡ ಕಷ್ಟದಲ್ಲೆ ಬೀಳುತ್ತೀರಿ.

ಅಗಾಧ ಸಾಮರ್ಥ್ಯವಿರುವ, ಇನ್ನೂ ತರುಣಾವಸ್ಥೆಯ ಇನ್ನೊಂದು ಪ್ರಭಾವೀ ಸಂಪ್ರದಾಯವಿದೆ, ಸಗೌರವವಾಗಿ ಅದನ್ನು ಸಂಪ್ರದಾಯ ಎನ್ನೋಣ, ಬೇಕಾದಂತೆ ತಿರುಚಿಕೊಂಡು ದುರುಪಯೋಗವಾಗುವ ಮಾಧ್ಯಮ ಅಲ್ಲ ಅದು, ಅದು ಸರ್ಕಾರದ ಸ್ವಾಮ್ಯಕ್ಕೆ ಒಳಪಟ್ಟು ಅದರ ಹತೋಟಿಯಲ್ಲಿಯೇ ಇರುವ ರೇಡಿಯೋ ಮತ್ತು ದೂರದರ್ಶನ. ಸಕಾರಾತ್ಮಕವಾಗಿ ಅವು ಏನೂ ಮಾಡಿಲ್ಲ. ನಾನು ಭಾಗವಹಿಸಿದ್ದ ಒಂದು ರೇಡಿಯೋ ಸಂವಾದದಲ್ಲಿ ನನ್ನ ಜೊತೆಗಿದ್ದ ಚೋ ರಾಮಸ್ವಾಮಿಯವರು ಸ್ವಲ್ಪ ವ್ಯಂಗ್ಯವಾಗಿ ದೂರದರ್ಶನ ಮತ್ತು ಆಕಾಶವಾಣಿಯನ್ನು ಹೊಗಳಿ ಮಾತನಾಡಿದರು, ಅವರು ಹಾಗೆ ಮಾಡಿದ್ದು ಮುಖ್ಯವಾಗಿ ವಾಣಿಜ್ಯ ವಾಹಿನಿಗಳು ಎಂಥ ಬಲೆಗೆ ಹೋಗಿ ಸಿಲುಕಿಕೊಂಡಿವೆ ಎಂಬುದರ ಚರ್ಚೆಯಿಂದ ತಪ್ಪಿಸಿಕೊಳ್ಳುವುದಕ್ಕಾಗಿ, ಆಕಾಶವಾಣಿ ಮತ್ತು ದೂರದರ್ಶನ ಇಂಥ ಅಪಕಾರ ಮಾಡುತ್ತಿಲ್ಲವಲ್ಲ ಇತ್ಯಾದಿ ಧಾಟಿಯಲ್ಲಿ ಅವರ ಮಾತು ಸಾಗಿತು. ಎಲ್ಲರ ಗಮನದಲ್ಲಿರುವುದು ಮುಖ್ಯವಾಗಿ ಇದೇ ಅಭಿಪ್ರಾಯ. ನನಗೆ ತಿಳಿದ ಮಟ್ಟಿಗೆ ಮತ್ತು ಚೋ ಅಂಥವರು ಮತ್ತು ಇತರರಿಗೆ ತಿಳಿದ ಮಟ್ಟಿಗೆ ಆಕಾಶವಾಣಿ ತರಂಗಗಳಲ್ಲಿ ಮತ್ತು ಉಪಗ್ರಹದ ಮೂಲಕ ದೂರದರ್ಶನದಲ್ಲಿ ಬರುವುದೆಲ್ಲ ಮನೋರಂಜನೆಗಾಗಿ. ಪತ್ರಿಕೋದ್ಯಮ ಕ್ಷೇತ್ರದಲ್ಲಿ ಗ್ರಿಶಾಮ್ (Grisham)ನ ನಿಯಮದಂಥದ್ದೇನೋ ಇಲ್ಲಿಯೂ ಕೆಲಸ ಮಾಡುವಂತೆ ಕಾಣುತ್ತದೆ.

ಪ್ರಾಥಮಿಕ ಶಿಕ್ಷಣ ಕ್ಷೇತ್ರದಲ್ಲಿ ನಾವು ಸೋತಿದ್ದೇವೆ. ಸಾಮಾನ್ಯ ಸಂಗತಿಯೆಂಬಂತೆ ಪ್ರಪಂಚದ ಅನೇಕ ದೇಶಗಳಲ್ಲಿ ಕಾನೂನು ಮಾಡಿ ದೊರಕಿಸಿಕೊಟ್ಟಿರುವ ಪ್ರಾಥಮಿಕ ಶಿಕ್ಷಣವನ್ನು ನಮ್ಮ ಅನೇಕ ರಾಜ್ಯಗಳಲ್ಲಿ ಜಾರಿಗೆ ತರಲು ಸೋತಿದ್ದೇವೆ. ಭಾರತದಲ್ಲಿ ತಂದೆ ತಾಯಂದಿರು ತಮ್ಮ ಮಕ್ಕಳನ್ನು ಕಡೆಯ ಪಕ್ಷ ಐದನೆ ತರಗತಿಯವರೆಗಾದರೂ ಶಾಲೆಗೆ ಕಳಿಸುವಂತೆ ಮಾಡಬೇಕು. ಇದಕ್ಕಿಂತ ಹೆಚ್ಚಿಗೆ ನಾವು ಕೇಳುವುದಿಲ್ಲ, ನಮ್ಮ ರಾಜ್ಯಾಂಗದ ನಿರ್ದೇಶಕ ಸೂತ್ರಗಳಲ್ಲಿ ಏನು ಹೇಳಿದೆಯೆಂಬುದು ನಮಗೆ ಗೊತ್ತು.



ಖೋಟಾ ನಾಣ್ಯವೇ ಚಲಾವಣೆಗಿಳಿದರೆ ಸಾಚಾ ನಾಣ್ಯ ಚಲಾವಣೆಯಿಂದ ಕಣ್ಮರೆಯಾದ ಹಾಗೆಯೇ; ಎಲ್ಲ ಕಡೆಯೂ ಹೀಗೇ ಆಗುತ್ತದೆಂದಲ್ಲ, ಬಹಳ ಸಲ ಹೀಗೆ ಆಗುತ್ತದೆ. ಅಂತಾರಾಷ್ಟ್ರೀಯವಾಗಿ ನಡೆಯುತ್ತಿರುವ ಹಲವಾರು ವಿದ್ಯಮಾನಗಳ ವರದಿ ಮಾಡುವುದರಲ್ಲಿ ಇಂಥ ಕಾಲುತೊಡರಿಸುವಾಟ ಮತ್ತು ತೂಕವಿಲ್ಲದ ವರ್ತನೆ ತಾನೇ ತಾನಾಗಿದೆ. ಈಗ ನೋಡಿದರೆ ರೂಪರ್ಟ್ ಮರ್ಡೋಚ್‌ನದೇ ಮೇಲುಗೈಯ್ಯಾದ ಜಾಗತಿಕ ಮಾಧ್ಯಮ ಸಾಮ್ರಾಜ್ಯಗಳಲ್ಲಿ ಅಗ್ಗದ ಜನಪ್ರಿಯತೆ, ಅಶ್ಲೀಲತೆಯ ಜಾಡಿಗೇ ಜೋತುಬೀಳುವುದು ಇವೇ ಉತ್ಕೃಷ್ಟತೆಯ ಗುರುತುಗಳೇನೋ ಎನ್ನುವಂತಾಗಿದೆ. USನಲ್ಲಿ ಫಾಕ್ಸ್ ಟೆಲಿವಿಷನ್ ನೆಟ್‌ವರ್ಕ್ ಮತ್ತು ಅದರ ಖ್ಯಾತಿಯನ್ನು ನೋಡಿದರೆ ಸಾಕು ಸಮಸ್ಯೆ ಏನು ಎಂದು ನಿಮಗೇ ಗೊತ್ತಾಗುತ್ತದೆ.

ಭಾರತದ ಮಟ್ಟಿಗೆ ಇನ್ನೂ ತಾರುಣ್ಯಾವಸ್ಥೆಯಲ್ಲಿರುವ ಈ ಮಾಧ್ಯಮ ಸಂಪ್ರದಾಯದ ಬೆಳವಣಿಗೆಯ ಹಂತ ನಮಗೆ ಆಸಕ್ತಿ ಕೆರಳಿಸುವಂಥದು. ಎಲ್ಲ ಸಮೂಹಗಳನ್ನೂ ತಲುಪಿ, ಪ್ರಭಾವಿಸಿ ತಮ್ಮ ಅಚ್ಚೊತ್ತುತ್ತವೆಂಬುದರಲ್ಲಿ ವಿವಾದವೇ ಇಲ್ಲದ ಮತ್ತು ನಮ್ಮ ಜನಗಳ ವಿಚಾರಕ್ಕೆ ಅವರ ಮೇಲೆ ಅಗಾಧ ಸತ್ ಪರಿಣಾಮ ಬೀರಬಲ್ಲ ಶಕ್ತಿಯಾದ, ದುರಾದೃಷ್ಟವಶಾತ್ ಅಪಖ್ಯಾತಿಗೆ ಒಳಗಾಗುವಷ್ಟು ದುರುಪಯೋಗವಾಗುತ್ತಿರುವ ಈ ಮಾಧ್ಯಮಗಳಿಗೆ ಮೂಲಭೂತ ಸ್ವಾಯತ್ತತೆ ನೀಡುವ ಪ್ರಯತ್ನ ನಡೆದಿದೆ. ಈ ಮಾಧ್ಯಮಗಳು ಸಾರ್ವಜನಿಕರಲ್ಲಿ ಜಾಗೃತಿಯನ್ನು ಮತ್ತು ಶೈಕ್ಷಣಿಕ ಮಟ್ಟವನ್ನು ಹೆಚ್ಚಿಸಿ ಆ ಮೂಲಕ ಭಾರತದ ವಿವಿಧೆಡೆಗಳ ಸಮುದಾಯಗಳು ಮುಖ್ಯವಾದ ಆರ್ಥಿಕ-ಸಾಮಾಜಿಕ ಸಮಸ್ಯೆಗಳಿಗೆ ಸಂವೇದನಾ ಶೀಲರಾಗುವಂತೆ ಮಾಡುವಷ್ಟು ಶಕ್ತವಾಗಿವೆ. ಉದಾಹರಣೆಗೆ, ಕಡ್ಡಾಯ ಪ್ರಾಥಮಿಕ ಶಿಕ್ಷಣದ ಅಗತ್ಯ, ಮೂಲಭೂತ ಪ್ರಾಥಮಿಕ ಶಿಕ್ಷಣ ಸಿಗದೆ ಇರುವುದಕ್ಕೂ ಮತ್ತು ಪ್ರಪಂಚದಲ್ಲಿಯೇ ಅತ್ಯಂತ ಹೆಚ್ಚಿನ ಸಂಖ್ಯೆಯಲ್ಲಿ ಅಂದಾಜು 40 ದಶ ಲಕ್ಷದಷ್ಟು ಅಥವಾ ಇನ್ನೂ ಹೆಚ್ಚು ಬಾಲಕಾರ್ಮಿಕರು ಇರುವುದಕ್ಕೂ ಇರುವ ಸಂಬಂಧ ಇಂಥ ಸಮಸ್ಯೆಗಳು. ದೂರದರ್ಶನಕ್ಕೆ ಇನ್ಯಾವುದೇ ಮಾಧ್ಯಮಕ್ಕೆ ಇರುವುದಕ್ಕಿಂತ ಹೆಚ್ಚು ಸಾಮರ್ಥ್ಯವಿದೆ, ಸಾಧ್ಯತೆಗಳಿವೆ ; ಅದು ಇಂಥ ಸಮಸ್ಯೆಗಳ ಮತ್ತು ಅಮರ್ತ್ಯ ಸೇನ್‌ರವರು ನಮ್ಮ ಲಕ್ಷ್ಯ ಸೆಳೆಯುತ್ತಿರುವಂಥ ಸಮಸ್ಯೆಗಳ ಕುರಿತು ಚರ್ಚೆಗಳನ್ನು ಮೀಟಿ ಜನರನ್ನು ಅವುಗಳ ಬಗ್ಗೆ ಸಂವೇದನಾಶೀಲರನ್ನಾಗಿಸಲು ಶಕ್ತವಾಗಿದೆ. ಪ್ರಾಥಮಿಕ ಶಿಕ್ಷಣವನ್ನು ನಾವು ಕಡೆಗಣಿಸಿದ್ದೇವೆ. ಪ್ರಾಥಮಿಕ ಶಿಕ್ಷಣ ಕ್ಷೇತ್ರದಲ್ಲಿ ನಾವು ಸೋತಿದ್ದೇವೆ. ಸಾಮಾನ್ಯ ಸಂಗತಿಯೆಂಬಂತೆ ಪ್ರಪಂಚದ ಅನೇಕ ದೇಶಗಳಲ್ಲಿ ಕಾನೂನು ಮಾಡಿ ದೊರಕಿಸಿಕೊಟ್ಟಿರುವ ಪ್ರಾಥಮಿಕ ಶಿಕ್ಷಣವನ್ನು ನಮ್ಮ ಅನೇಕ ರಾಜ್ಯಗಳಲ್ಲಿ ಜಾರಿಗೆ ತರಲು ಸೋತಿದ್ದೇವೆ. ಭಾರತದಲ್ಲಿ ತಂದೆ ತಾಯಂದಿರು ತಮ್ಮ ಮಕ್ಕಳನ್ನು ಕಡೆಯ ಪಕ್ಷ ಐದನೆ ತರಗತಿಯವರೆಗಾದರೂ ಶಾಲೆಗೆ ಕಳಿಸುವಂತೆ ಮಾಡಬೇಕು. ಇದಕ್ಕಿಂತ ಹೆಚ್ಚಿಗೆ ನಾವು ಕೇಳುವುದಿಲ್ಲ, ನಮ್ಮ ರಾಜ್ಯಾಂಗದ ನಿರ್ದೇಶಕ ಸೂತ್ರಗಳಲ್ಲಿ ಏನು ಹೇಳಿದೆಯೆಂಬುದು ನಮಗೆ

ಗೊತ್ತು. ಸರ್ವೋಚ್ಚ ನ್ಯಾಯಾಲಯ ಪ್ರಾಥಮಿಕ ಶಿಕ್ಷಣ ಮೂಲಭೂತ ಹಕ್ಕು ಎಂದು ಪ್ರಾವಿಧಿಯನ್ನು ಎತ್ತಿ ಹಿಡಿದಿರುವುದೂ ನಮಗೆ ಗೊತ್ತು, ಆದರೆ ನಾವು ಆ ಗುರಿಯಿಂದ ತುಂಬ ಹಿಂದೆಯೇ ಉಳಿದಿದ್ದೇವೆ, ಗುರಿ ತಲುಪಲು ತುಂಬ ದೂರ ಸಾಗಬೇಕಾಗಿದೆ. 21ನೇ ಶತಮಾನಾರಂಭದಲ್ಲಿದ್ದ ಪ್ರಪಂಚದ ಅನಕ್ಷರಸ್ಥರಲ್ಲಿ ಅರ್ಧಪಾಲು ನಮ್ಮದೇ ಎಂಬ ಅಪಖ್ಯಾತಿಯ ಪಟ್ಟ ನಮ್ಮದು. ಇದು ಅಂದಾಜು ಮಾತ್ರ. ಸರ್ಕಾರದ ನೀತಿಗಳಲ್ಲಿ ತೀವ್ರ ಬದಲಾವಣೆಗಳನ್ನು ತರದ ಹೊರತು ನಾಟಕದ ಹಟಾತ್ ದೃಶ್ಯದಂತೆ ಇದೆಲ್ಲ ಬದಲಾಗುತ್ತದೆಂದೇನೂ ನನಗೆ ಅನಿಸುವುದಿಲ್ಲ. ನಮ್ಮ ದೇಶದಲ್ಲಿ ಸರಳ ಶಾಸನ ಮಾಡಿ ಪ್ರಾಥಮಿಕ ಶಿಕ್ಷಣವನ್ನು ಕಡ್ಡಾಯಗೊಳಿಸಿದ ಮೊದಲ ರಾಜ್ಯ ತಮಿಳು ನಾಡು. 1990ರಲ್ಲಿ ಹೆಚ್ಚಿನ ಚರ್ಚೆ ನಡೆಸದೆ ಅಲ್ಲಿಯ ವಿಧಾನ ಸಭೆ ಆ ಶಾಸನವನ್ನು ಅಂಗೀಕರಿಸಿತು. ಆದಕ್ಕೆ ರಾಷ್ಟ್ರಪತಿಯವರ ಅಂಗೀಕಾರ ಮುದ್ರೆ ಬೀಳಲು ವರ್ಷಗಳೇ ಹಿಡಿಸಿದುವು. ಅದು ಇನ್ನೂ ಜಾರಿಗೆ ಬರಬೇಕಿದೆ. ಇಂಥ ಪರಿಸ್ಥಿತಿಯಲ್ಲಿ ನಾವು ಮಾಡುವುದಾದರೂ ಏನು?



ಪರಿಪೂರ್ಣ ಯೋಜನೆಯ ಭರವಸೆಯನ್ನೇನೂ ಪ್ರಸಾರ ಭಾರತಿ ಶಾಸನ ನೀಡುತ್ತಿಲ್ಲ, ಆದರೆ ಇವತ್ತು ಭಾರತದಲ್ಲಿ ಏನು ಪರಿಸ್ಥಿತಿ ಇದೆಯೋ ಅದರಲ್ಲಿ ಪ್ರಮುಖ ಬದಲಾವಣೆ ತರುವ ಭರವಸೆ ನೀಡುತ್ತದೆ. ಮಾಧ್ಯಮಗಳ ನಮಗೆ ಸ್ವಾಯತ್ತತೆ ದೊರಕಲಿದೆ. ಪ್ರಸಾರ ಭಾರತಿ ಮಂಡಲಿ ರಚನೆಯಾಗಲಿದೆ. ಅದರಲ್ಲಿ ಹದಿನೈದು ಜನ ಸದಸ್ಯರಿರುತ್ತಾರೆ, ಅದನ್ನು ಕೆಲಮಟ್ಟಿಗೆ ಉಸ್ತುವಾರಿ ಮಾಡಲು ಇಪ್ಪತ್ತೆರಡು ಸದಸ್ಯರ ಸಂಸದೀಯ ಸಮಿತಿಯೂ ಇರುತ್ತದೆ. ಒಂಬುಡ್ಸ್‌ಮನ್ ರೀತಿಯಲ್ಲಿ ಅದು ಏನಾದರೂ ಮಾಡಲಾದೀತೆ ಎಂದು ಸಂದೇಹಗಳು ವ್ಯಕ್ತವಾಗಿವೆ ; ಪ್ರಸಾರ ಸಮಿತಿ (The Broadcasting Council) ಸಾರ್ವಜನಿಕರ ದೂರುಗಳನ್ನು ಆಲಿಸುತ್ತದೆ ಮತ್ತು ದೂರದರ್ಶನ ಮತ್ತು ಆಕಾಶವಾಣಿಯ ಅನುದಿನದ ವ್ಯವಹಾರದಲ್ಲಿ ಮಧ್ಯಪ್ರವೇಶವಿರುವುದಿಲ್ಲ, ಆಳುವ ಪಕ್ಷದ ಅಥವಾ ಯಾವುದೇ ಒಂದು ಪಕ್ಷದ ಅಥವಾ ವ್ಯಕ್ತಿಯ ಹಿತ ರಕ್ಷಣೆಗೆ ಈ ಮಾಧ್ಯಮಗಳನ್ನು ದುರುಪಯೋಗಪಡಿಸುವುದಿಲ್ಲ ಎಂದು ಯೋಜನೆ ರಕ್ಷಣೆ ಒದಗಿಸುತ್ತದೆ. ಯೋಜನೆ ಪರಿಪೂರ್ಣವೇನೂ ಅಲ್ಲ, ಆದರೂ ಅದರಲ್ಲಿ ಭರವಸೆ ಕಾಣುತ್ತಿದೆ.

ಸಾಂಕುಶ ಸ್ವಾಯತ್ತತೆಯ BBC ಮಾದರಿಯೂ ನಮ್ಮೆದುರಿಗಿದೆ, ಅಮೆರಿಕೆಯ ಸಂಯುಕ್ತ ಸಂಸ್ಥಾನಗಳಲ್ಲಿ ಮತ್ತು ಹೀಗೇ ಇತರೆಡೆಗಳಲ್ಲಿರುವುದಕ್ಕೆ ಹೋಲಿಸಿದರೆ ನನಗೆ ಇದೇ ಆಕರ್ಷಕ ಪರ್ಯಾಯವಾಗಿ ಕಾಣುತ್ತದೆ. ವ್ಯಾಪಾರೀ ನಡವಳಿಕೆಗಳನ್ನು ಇತಿಮಿತಿಯಲ್ಲಿರಿಸಿರುವ BBC ವೃತ್ತಿಪರ ಸ್ವಾಯತ್ತತೆ ನೀಡಿ, ಏನೆಲ್ಲ ದೋಷಗಳಿದ್ದರೂ, ಅದನ್ನು ಉಳಿಸಿಕೊಂಡಿದೆ. ಭಾರತಕ್ಕೆ ಈ ಮಾದರಿಯೇ ಆಕರ್ಷಕವಾಗಿ ಕಾಣುತ್ತದೆ. ಭಾರತದಲ್ಲಿ ಈ ಎರಡೇ ಪ್ರಮುಖ ಮಾಧ್ಯಮಗಳೆಂದು ನನಗನಿಸುತ್ತದೆ.

### ಪತ್ರಿಕೆಗಳ ವ್ಯಾಪ್ತಿ ಮತ್ತು ಪ್ರಭಾವ

ಪತ್ರಿಕೆಗಳ ವ್ಯಾಪ್ತಿ ಮತ್ತು ಪ್ರಭಾವಗಳ ಪ್ರಶ್ನೆ ಬಂದಾಗ ಅವುಗಳ ವಿಷಯಕ್ಕೆ ನಾವು ಇನ್ನೂ ಬಹಳ ದೂರ ಕ್ರಮಿಸಬೇಕಾಗಿರುವುದನ್ನು ತೋರಿಸಲು ನಾನಿಲ್ಲಿ ಸಂಕ್ಷಿಪ್ತವಾಗಿ ಕೆಲವು ಅಂಕಿಅಂಶಗಳನ್ನು ಎತ್ತಿ ಹೇಳುತ್ತೇನೆ. ವ್ಯಾಪ್ತಿಯ ಕುರಿತು ರಾಷ್ಟ್ರೀಯ ವಾಚಕ ಸಂಖ್ಯೆಯ ಸರ್ವೇಕ್ಷಣೆ ಭಾರತದ ಗ್ರಾಮೀಣ ಹಾಗೂ ನಗರ ಪ್ರದೇಶಗಳಲ್ಲಿ ಸರಿಸುಮಾರು 90 ರಿಂದ 100 ದಶಲಕ್ಷ ಓದುಗರಿದ್ದಾರೆನ್ನುತ್ತದೆ. ಅಂದರೆ ಪ್ರಥಮತಃ ಭಾರತದ ನಗರ ಮತ್ತು ಗ್ರಾಮೀಣ ಪ್ರದೇಶದ 90 ರಿಂದ 100 ದಶಲಕ್ಷ ವಯಸ್ಕರನ್ನು ಪತ್ರಿಕೆಗಳು ತಲುಪುತ್ತವೆ. ಇದು ಗಣನೀಯ ವ್ಯಾಪ್ತಿ, ನಿಶ್ಚಯವಾಗಿ ಪ್ರಭಾವ ಬೀರುವಂಥ ಮತ್ತು ರೂಢಿಯ ಜಾಡು ಕೊರೆಯುವಂಥ ಪ್ರಭಾವ. ಯಾವುದಾದರೂ ಭ್ರಷ್ಟಾಚಾರದ ವಿರುದ್ಧ ಪತ್ರಿಕೆ ಆಂದೋಳ ಪ್ರಾರಂಭಿಸಿತೆನ್ನಿ ಆಗ ಅನೇಕ ಪ್ರಕರಣಗಳಲ್ಲಿ ಹೀಗಾಗುವುದನ್ನು ನೋಡಿದ್ದೀರಿ, ಉದಾಹರಣೆಗೆ, ಬೋಫೋರ್ಸ್‌ನಂಥ ಅಥವಾ ರಾಜಕೀಯ ಸಂಘಟನೆಯ ತಂತ್ರವಾಗಿ ಜಾತೀಯತೆ ಬೆಳೆಸುವುದರ ವಿರುದ್ಧ ಹೋರಾಟದಂಥ ಪ್ರಕರಣ. ಆದರೆ, ಸಾರ್ವಜನಿಕ ಅಭಿಪ್ರಾಯ ರೂಪಿಸುವುದಕ್ಕೆ ಇದರಿಂದ ಪ್ರಭಾವ ಬೀಳುವುದಾದರೂ ಎಷ್ಟು? ಉದಾಹರಣೆಗೆ ಬೋಫೋರ್ಸ್ ಪ್ರಕರಣವನ್ನೆ ತೆಗೆದುಕೊಳ್ಳೋಣ. ದಿ ಹಿಂದೂ ಪತ್ರಿಕಾ ಸಮೂಹ ಇದನ್ನು ವಿವರವಾಗಿ ತನಿಖೆ ಮಾಡಿತು. ಆದರೂ ದಕ್ಷಿಣ ಭಾರತದ ಜನ 1989ರ ಸಾರ್ವತ್ರಿಕ ಚುನಾವಣೆಗಳಲ್ಲಿ ಕಾಂಗ್ರೆಸ್ ಮತ್ತು ಅದರ ಮಿತ್ರ ಪಕ್ಷಗಳನ್ನು ಅತ್ಯಧಿಕ ಬಹುಮತದಿಂದ ಗೆಲ್ಲಿಸಿದರು. ನಿಜವಾದ ಹೋರಾಟ ನಡೆದಿದ್ದು ಪತ್ರಿಕೆಗಳ ನೇರ ವ್ಯಾಪ್ತಿ ತುಂಬ ಕಡಿಮೆ ಇರುವ ಉತ್ತರದಲ್ಲಿ, ಅದರಲ್ಲಿಯೂ ಹಿಂದೀ ಭಾಷಾ ಪಟ್ಟಿಯ ಪ್ರದೇಶಗಳಲ್ಲಿ, ಖಂಡಿತವಾಗಿಯೂ ಬೋಫೋರ್ಸ್ ಬಂದಿದ್ದು ಅಲ್ಲಿ. ಆದ್ದರಿಂದ, ನೇರ ವ್ಯಾಪ್ತಿ ಮತ್ತು ಪ್ರಭಾವ ಇವೇ ಆಗಬೇಕು ಎನ್ನುವಂತಿಲ್ಲ. ಒಳಿತನ್ನ ಸಾಧಿಸುತ್ತೇವೆ ಅಥವಾ ನಾವು ಸಮಾಜದ ಹಿತ ಕಾಯುವ ಕಾವಲು ನಾಯಿಗಳು ಎಂದು ಹೊರಟ

*ಭಾರತದ ಗ್ರಾಮೀಣ ಹಾಗೂ ನಗರ ಪ್ರದೇಶಗಳಲ್ಲಿ ಸರಿಸುಮಾರು 90 ರಿಂದ 100 ದಶಲಕ್ಷ ಓದುಗರಿದ್ದಾರೆನ್ನುತ್ತದೆ. ಅಂದರೆ ಪ್ರಥಮತಃ ಭಾರತದ ನಗರ ಮತ್ತು ಗ್ರಾಮೀಣ ಪ್ರದೇಶದ 90 ರಿಂದ 100 ದಶಲಕ್ಷ ವಯಸ್ಕರನ್ನು ಪತ್ರಿಕೆಗಳು ತಲುಪುತ್ತವೆ. ಇದು ಗಣನೀಯ ವ್ಯಾಪ್ತಿ ನಿಶ್ಚಯವಾಗಿ ಪ್ರಭಾವ ಬೀರುವಂಥ ಮತ್ತು ರೂಢಿಯ ಜಾಡು ಕೊರೆಯುವಂಥ ಪ್ರಭಾವ.*

ಪತ್ರಿಕಾಕರ್ತರು ಕೆಲವು ಸಲ ಭ್ರಮೆಗೀಡಾಗುತ್ತೇವೆ. ನಮ್ಮ ಸಾಮರ್ಥ್ಯಕ್ಕೆ ಮೀರಿದ ಕೆಲಸ ಸಾಧಿಸಲಾಗದೆ ಸೋಲುತ್ತೇವೆ. ಆದರೆ, ನಮ್ಮ ವೈಶಿಷ್ಟ್ಯ ಎದ್ದು ಕಾಣುವುದು ಯಾವಾಗೆಂದರೆ ಸಾರ್ವಜನಿಕ ಉತ್ಸಾಹದಿಂದ ಕೂಡಿದ ಪತ್ರಿಕೋದ್ಯಮ ತನ್ನ ಉತ್ತುಂಗದಲ್ಲಿದ್ದಾಗ ಅಥವಾ ಸಾಮಾಜಿಕ ಕಳಕಳಿಯಿಂದ ಕೂಡಿದ ಪತ್ರಿಕೋದ್ಯಮ ಹಸಿವು, ಬಡತನ ಮತ್ತು ನೆಲೆತಪ್ಪಿದವರು, ಭ್ರಷ್ಟಾಚಾರ ಮತ್ತು ರಾಜಕೀಯ ತಂತ್ರವಾಗಿ ಜಾತೀಯತೆ, ಅಥವಾ ಕಡ್ಡಾಯ ಪ್ರಾಥಮಿಕ ಶಿಕ್ಷಣ, ಅಥವಾ ಬಾಲಕಾರ್ಮಿಕ ಪದ್ಧತಿಯ ವಿರುದ್ಧ ಒಗ್ಗೂಡಿ ಆಂದೋಳನ ನಡೆಸಬೇಕಾದುದು ಇಂಥ ಪ್ರಶ್ನೆಗಳೆದುರು ಮುಖಾಮುಖಿಯಾದಾಗ. ಗಂಭೀರ ಸ್ವರೂಪದ ಪತ್ರಿಕೋದ್ಯಮ ಸಂಪ್ರದಾಯದಲ್ಲಿ ನಡೆದುದೇ ಆದರೆ ಪತ್ರಿಕೆಗಳು ರಾಷ್ಟ್ರೀಯವಾಗಿ ಸಾರ್ವಜನಿಕ ಕಾರ್ಯಕ್ರಮವನ್ನು ತಿದ್ದಿ ರೂಪಿಸುವುದರಲ್ಲಿ ತಮ್ಮ ವೈಶಿಷ್ಟ್ಯ ಮೆರೆಯಬಲ್ಲವು. ಭಾರತೀಯ



ಭಾಷಾ ಪತ್ರಿಕೋದ್ಯಮ ಹೊಸ ಕ್ಷೇತ್ರಗಳಲ್ಲಿ ಬೆಳೆದುದೇ ಆದರೆ ಅದು ದೂರದರ್ಶನ ಮತ್ತು ಆಕಾಶವಾಣಿಗಳಿಗಿಂತ ವಿಭಿನ್ನವಾದ ತನ್ನ ವೈಶಿಷ್ಟ್ಯವನ್ನು ಮುಂದುವರಿಸಿಕೊಂಡು ಬರುವುದು ಖಂಡಿತ. ರಾಷ್ಟ್ರ ಮಟ್ಟದಲ್ಲಿ ನಡೆದ ಎಲ್ಲ ಸರ್ವೇಕ್ಷಣೆಗಳು ತೋರಿಸಿರುವಂತೆ ಪತ್ರಿಕೆಗಳ ವ್ಯಾಪ್ತಿಯಲ್ಲಿ ಮೊಟ್ಟ ಮೊದಲಿಗೆ ಈ ದೇಶದ ನಗರ ಮತ್ತು ಗ್ರಾಮಾಂತರಗಳಿಗೆ ತುಂಬ ಅಸಮಾನತೆಯಿದೆ ಮತ್ತು ಸಮಸ್ಥಿತಿಯೂ ಇಲ್ಲ. ಇದಕ್ಕೆ ಅಪವಾದವೆಂದರೆ ಕೇರಳ ರಾಜ್ಯ, ಅಲ್ಲಿ ನಡೆಸಿದ ವಾಚಕರ ಸರ್ವೇಕ್ಷಣೆಯಂತೆ ಗ್ರಾಮಾಂತರ ಪ್ರದೇಶಗಳಿಗೆ ಪ್ರತಿದಿನವೂ ಮಲೆಯಾಳಂ ಮನೋರಮಾ, ಮಾತೃಭೂಮಿ ಮತ್ತು ಇನ್ನೂ ಹಲವಾರು ದಿನಪತ್ರಿಕೆಗಳು ವಯಸ್ಕರಲ್ಲಿ ಬಹು ಸಂಖ್ಯಾತರ ಕೈಗೆ ತಲುಪುತ್ತವೆ. ಭಾರತದ ಇನ್ನಾವುದೇ ರಾಜ್ಯದಲ್ಲಿ ಗ್ರಾಮಾಂತರ ಜನಸಂಖ್ಯೆಯ ಶೇ. 10ಕ್ಕಿಂತ ಹೆಚ್ಚು ಜನಕ್ಕೆ ಪತ್ರಿಕೆಗಳು ತಲುಪುವುದಿಲ್ಲ. ಇತ್ತೀಚಿನ ಪುರಾವೆಗಳು ತೋರಿಸುವಂತೆ ಮುಂದುವರಿದ ರಾಜ್ಯಗಳಲ್ಲಿಯೂ ಈ ಸಂಖ್ಯೆ ಶೇ. 12ರ ಆಜುಬಾಜಿನಲ್ಲೇ ಇದೆ. ಹೀಗಾಗಿ, ಪತ್ರಿಕೆ ನಗರ ಮಾಧ್ಯಮವಷ್ಟೆ ಆಗಿ ಉಳಿದುಹೋಗಿರುವುದೇ ಒಂದು ದೊಡ್ಡ ಸಮಸ್ಯೆ. ಪತ್ರಿಕೆಗಳು ಗ್ರಾಮೀಣ ಭಾರತದ ಬಹು ಸಂಖ್ಯಾತ ಜನರ ಬಳಿಗೂ ಸುಳಿದಿಲ್ಲ. ಕಾತರ ಹುಟ್ಟಿಸುವ ಇನ್ನೂ ಒಂದು ಪುರಾವೆಯೆಂದರೆ ಅವು ಮುಖ್ಯವಾಗಿ ಪುರುಷರಿಗಷ್ಟೆ ತಲುಪುವುದು. ಅಂಕಿ-ಅಂಶಗಳು ಹೇಳುವಂತೆ ಪತ್ರಿಕೆ ಓದುವ ಸ್ತ್ರೀಯರ ಸಂಖ್ಯೆ ತೀರಾ ನಗಣ್ಯ..

### ಪತ್ರಿಕೆಯ ವಿರೋಧಾತ್ಮಕ ಪಾತ್ರ

ಈ ದೌರ್ಬಲ್ಯಗಳು ಏನೇ ಇರಲಿ, ಭಾರತೀಯ ಪತ್ರಿಕೆಗಳನ್ನು ಇಲ್ಲಿಯ ಜನ ನಂಬಿಕೆಗೆ ಅರ್ಹನಾದ ಸುದ್ದಿಯ ದೂತನೆಂದು ಆದರಿಸಿಟ್ಟಿದ್ದಾರೆ. ಹಿಂದಿನಿಂದಲೂ ಪತ್ರಿಕಾ ಸಂಪ್ರದಾಯದ ವಿಶ್ವಾಸಾರ್ಹ ವಾರ್ತಾ ಪ್ರಸಾರಣೆ ನಡೆದು ಬರುತ್ತಿದ್ದರೂ, ತರುಣ ಸಂಪ್ರದಾಯದಲ್ಲಿ, ಅದರಲ್ಲಿಯೂ ವಿವಾದಾತ್ಮಕ ಪ್ರಶ್ನೆಗಳಿದ್ದಾಗ ಹೀಗಿಲ್ಲ. ನನ್ನ ದೃಷ್ಟಿಯಲ್ಲಿ ವಿಶ್ವಾಸಾರ್ಹ ವಾರ್ತಾಪ್ರಸಾರಣ ಮೊಟ್ಟಮೊದಲ ಕರ್ತವ್ಯ. ಎರಡನೆಯದಾಗಿ, ಇಲ್ಲಿಗೇ ನಿಲ್ಲಿಸದೆ ಇನ್ನೂ ಮುಂದೆ ಸಾಗಿ ಪ್ರಶ್ನಿಸುವ, ಸವಾಲೆಸೆಯುವ, ಟೀಕಿಸುವ, ರಹಸ್ಯ ಸ್ಫೋಟ ಮಾಡುವ ಮತ್ತು ತನಿಖೆ ನಡೆಸುವ ಕರ್ತವ್ಯದಲ್ಲಿ ಯಾವುದಾದರೂ ರೀತಿಯ ವಿವೇಚನಾತ್ಮಕ ಪಾತ್ರ ನಿರ್ವಹಿಸುವುದು. ಪತ್ರಿಕೋದ್ಯಮಿಗಳು ಕೆಲವು ಸಾರಿ ಇದನ್ನು ವಿರೋಧಾತ್ಮಕ ಕರ್ತವ್ಯವೆಂದು ಹೆಸರಿಸುತ್ತಾರೆ. ಪತ್ರಿಕೆ ಮತ್ತು ಅಧಿಕಾರಸ್ಥರು ಅಥವಾ ರಾಜಕಾರಣಿಗಳ ನಡುವಿನ ಮೂಲಭೂತ ಸಂಬಂಧದಲ್ಲಿ ವಿರೋಧಾತ್ಮಕವಾದುದೇನೂ ಒಳಗೊಂಡಿಲ್ಲವೆಂದೇ ನನ್ನ ನಂಬುಗೆ, ಹೀಗೆಯೇ ನಂಬುವ ಬೇರೆ ಜನರೂ ಇದ್ದಾರೆ. ಇದನ್ನು ವಿರೋಧಾತ್ಮಕ ಸಂಬಂಧವೆನ್ನಿ ಅಥವಾ ಇನ್ನೂ ತೂಕವಾದ ಶಬ್ದವಿರಲಿ ಎಂದು 'ಕಾವಲು ನಾಯಿಯ' ಪಾತ್ರವೆನ್ನಿ ಅದು ಹೇಳುವುದು ಒಂದು ರೀತಿಯ ಕರ್ತವ್ಯದ ಬಗ್ಗೆ, ಅಂಥ ಕರ್ತವ್ಯ ನಿರ್ವಹಣೆಗೆ ಮಹತ್ವದ ಪ್ರಶ್ನೆಗಳನ್ನೆತ್ತಿಕೊಂಡಾಗ ಅದನ್ನು ವಿಮರ್ಶಾತ್ಮಕ ಕರ್ತವ್ಯವೆಂದೂ ಅಥವಾ ತನಿಖಾ ಪತ್ರಿಕೋದ್ಯಮವೆಂದೂ ವಿವರಿಸಲು ಬರುತ್ತದೆ. ಹೀಗೆ ಹೇಳುವಾಗ ನನ್ನ ಮನಸ್ಸಿನಲ್ಲಿರುವುದು ಪ್ರಶ್ನೆಗಳು ಯುಕ್ತವಾದ ಪ್ರಶ್ನೆಗಳಾಗಿರಬೇಕೆಂಬುದು, ಡಯಾನಾ ಮತ್ತು ಡೋಡಿ ಯಾವುದೋ ಹೋಟೆಲಿನಲ್ಲಿ ಕುಳಿತು ಏನು ಮಾಡುತ್ತಿದ್ದರು ಎಂದು ತನಿಖೆ ಮಾಡುವುದಲ್ಲ– ಇಂಥವೆಲ್ಲ ಅತ್ಯಂತ ಹೀನಾಯ ತನಿಖಾ ಪತ್ರಿಕೋದ್ಯಮ. ಬದಲಾಗಿ ವಾಟರ್ ಗೇಟ್ ಹಗರಣದಂಥವನ್ನು ನೋಡಿ. ಭಾರತದಲ್ಲಿಯೂ ಇಂಥವು ಬೇಕಾದಷ್ಟಿವೆ – ಬೋಫೋರ್ಸ್, ಕಮಲಾಳ ಕಥೆ, ಕ್ಯೋ ಆಯಿಲ್ ವ್ಯವಹಾರ, ಹರ್ಷದ್ ಮೆಹ್ತಾ ಹಗರಣ, ಇತ್ಯಾದಿ. ತನಿಖಾ ಪತ್ರಿಕೋದ್ಯಮಕ್ಕೆ ಅತ್ಯುತ್ತಮ ಉದಾಹರಣೆಗಳು ಇವು. ಬೇರೆ ಇನ್ನೂ ದುಸ್ಸಹ ಪ್ರಶ್ನೆಗಳಿವೆ, ಅವುಗಳಿಗೆ ಪ್ರತಿಕ್ರಿಯಿಸಲು ಪತ್ರಿಕೆಗಳು ತಡ ಮಾಡುತ್ತಿವೆ. ಬಿಕ್ಕಟ್ಟಿನ ಪರಿಸ್ಥಿತಿ ಹುಟ್ಟಿಕೊಂಡಾಗ ಲವಲವಿಕೆಯಿಂದ ತನಿಖೆ ನಡೆಸಬೇಕಾದ ಪತ್ರಿಕೆಗಳು ಹೀಗೆ

ಮೂಡುವುದು ವಿರೋಧಾಭಾಸವೇ ಸರಿ. ಹಸಿವಿನ ಉದಾಹರಣೆಯನ್ನು ತೆಗೆದುಕೊಳ್ಳಿ. ಅಮರ್ತ್ಯ ಸೇನ್‌ರವರು ಹೇಳುವಂತೆ – ಸ್ವಾತಂತ್ರ್ಯೋತ್ತರ ಭಾರತದಲ್ಲಿ ಹಸಿವಿನ ಕೂಗು ಕೇಳಿ ಬಂದಿಲ್ಲ. ಇದಕ್ಕೆ ಕಾರಣವೇನಿರಬಹುದು?

ಮಾರುಕಟ್ಟೆ ಶಕ್ತಿಗಳಿಗೆ ಮಣಿದು ಅದರಂತೆ ತಮ್ಮ ಪಾತ್ರವೇನಿರಬೇಕೆಂದು ರೂಪಿತವಾಗುವುದಕ್ಕೆ ಮಾಧ್ಯಮಗಳು



ಅವಕಾಶ ನೀಡುವುದು ಸಲ್ಲ. ಮಾರುಕಟ್ಟೆ ಅತ್ಯಂತ ಮುಖ್ಯ, ಅದಿಲ್ಲದೆ ನಡೆಯುವುದಿಲ್ಲವೆಂಬುದು ನಿಜ. ಪತ್ರಿಕೆ ಪ್ರಸಾರವಾಗಬೇಕು, ಜಾಹಿರಾತು ಸಿಗಬೇಕು, ಮಾರುಕಟ್ಟೆಯಲ್ಲಿ ನಾವು ಏಳಿಗೆಯಾಗಬೇಕು. ಹಾಗೆಂದು ಪತ್ರಿಕೋದ್ಯಮವೆಂದರೆ ಅದೂ ಒಂದು ಉತ್ಪನ್ನ ಅಥವಾ ಉತ್ಪನ್ನದ ಹೆಸರು ಎನ್ನುವವರ ಕೈಗೆ ಅದನ್ನು ಒಪ್ಪಿಸುವುದಕ್ಕಾಗುವುದಿಲ್ಲ. ಆದರೆ ಭಾರತೀಯ ಮಾಧ್ಯಮಗಳಲ್ಲಿ ಇದನ್ನೆ ಮಾಡುವ ಅನೇಕರಿದ್ದಾರೆ. ಅಂಥವರ ಯಾರದೇ ಹೆಸರು ಹೇಳುವುದಕ್ಕೂ ನನಗೆ ಇಷ್ಟವಿಲ್ಲ. ಹಾಗೆ ಹೇಳುವುದು ಉಚಿತವಲ್ಲ. ಏಕೆಂದರೆ, ನಮ್ಮ ಆಪಾದನೆಗಳಿಗೆ ಅಥವಾ ಟೀಕೆಗಳಿಗೆ ಸಮಜಾಯಿಷಿ ನೀಡಲು ಅವರು ಇಲ್ಲಿ ಹಾಜರಿಲ್ಲ. ಇಂಥ ಪ್ರಶ್ನೆಗಳನ್ನು ನಾವು ಚರ್ಚಿಸುವಾಗ ಅವರು ಹಾಜರಿದ್ದರೆ ತುಂಬ ಒಳ್ಳೆಯದೇ, ಅದೇನಿದ್ದರೂ ಪತ್ರಿಕೆಗಳು ಸಹ ಇನ್ನಿತರ ಉಪಭೋಗ ವಸ್ತುಗಳಂತೆಯೇ ಒಂದು ಎನ್ನುವ ಶಕ್ತಿಗಳ ವಶಕ್ಕೆ ಪತ್ರಿಕೆಗಳನ್ನು ಒಪ್ಪಿಸಿಬಿಡುವುದು ಖಂಡಿತ ಕೂಡದು.

**ಮಾಹಿತಿ, ಶಿಕ್ಷಣ ಮತ್ತು ಉತ್ಪಾದನಾ ಸಹಮತಿ - ಮಾಧ್ಯಮ ಈ ಜವಾಬ್ದಾರಿಗಳನ್ನು ಹೇಗೆ ನೀಗಿಸುತ್ತದೆ?**

ಮಾಧ್ಯಮಕ್ಕೆ ಮೂರು ಪಾತ್ರಗಳು - ಮಾಹಿತಿ, ಶಿಕ್ಷಣ ಮತ್ತು ಉತ್ಪಾದನಾ ಸಹಮತಿ. ಭಾರತದಲ್ಲಿಯೂ ಒಂದು ಪ್ರಚಾರ ಮಾದರಿ ಕಾರ್ಯೋನ್ಮುಖವಾಗಿರುವುದು ಕಾಣುತ್ತದೆ – ಅದು ಉದಾರೀಕರಣ ನೀತಿಗಳಿಗೆ ಸಂಬಂಧಿಸಿದಂತೆ ಆರ್ಥಿಕ ನೀತಿಗಳನ್ನು ಒಪ್ಪಿಕೊಳ್ಳುವ ಉತ್ಪಾದನಾ ಸಹಮತಿ. ಇಲ್ಲಿ ನಿಷ್ಪಕ್ಷಪಾತ ಚರ್ಚೆಗಳಿಗೆ ಇನ್ನೂ ವಿಪುಲ ಅವಕಾಶಗಳಿರಬೇಕು. ಆದರೆ, ನಮ್ಮಲ್ಲಿ ಸಮಾನ ಸ್ಥಳಾವಕಾಶ ಅಥವಾ ವಿಮರ್ಶಾತ್ಮಕ, ವಿರೋಧಾತ್ಮಕ ಅಭಿಪ್ರಾಯ ಇಂಥವುಗಳು ಇಲ್ಲವೇ ಇಲ್ಲ.

ಆಗೊಮ್ಮೆ ಈಗೊಮ್ಮೆ ಪತ್ರಿಕೆಗಳು ಮಧ್ಯಪ್ರವೇಶಿಸುತ್ತವೆ, ನಿಜ. ಆದರೆ, ಭಾರತೀಯ ಪತ್ರಿಕೆಗಳು ಭ್ರಷ್ಟಾಚಾರ, ಹಸಿವು, ಬಾಲಕಾರ್ಮಿಕ ಸಮಸ್ಯೆ, ಅಥವಾ ಜಾತೀಯತೆ ಇಂಥ ಪ್ರಶ್ನೆಗಳನ್ನೆತ್ತಿಕೊಂಡು ನಿರ್ವಹಿಸುವ ಪಾತ್ರಕ್ಕೆ ಹೋಲಿಸಿದರೆ ನಿರಂತರ ಹಸಿವು, ನಿರಂತರ ಅಭಾವದ ಪೀಡೆ, ಪೌಷ್ಟಿಕಾಂಶಗಳ ಕೊರತೆ ಇಂಥವನ್ನು ಕುರಿತು ಸಮರ್ಥವಾಗಿ ಬರೆಯುವುದೇ ಕಡಿಮೆ. ಮಾಧ್ಯಮ ಮಕ್ಕಳ ಹಕ್ಕುಗಳನ್ನು ಕುರಿತು ಒಳನೋಟಗಳನ್ನು ನೀಡಿ, ವರ್ತಮಾನದ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳಲು ಸಾಧ್ಯವಾಗಬಹುದು. ನಮ್ಮಲ್ಲಿ ಇಷ್ಟು ಅಗಾಧ ಪ್ರಮಾಣದಲ್ಲಿ ಬಾಲಕಾರ್ಮಿಕರು ಇರುವುದಾದರೂ ಹೇಗೆ? ಈ ಪ್ರಮಾಣದಲ್ಲಿ ಬಾಲಕಾರ್ಮಿಕರು ಇರುವುದಕ್ಕೂ ಮತ್ತು ಕಡ್ಡಾಯ ಪ್ರಾಥಮಿಕ ಶಿಕ್ಷಣ ಇಲ್ಲದಿರುವುದಕ್ಕೂ ಸಂಬಂಧ ಇದೆಯಲ್ಲವೆ? ಹಾಗಾದರೆ, ಅದೆಂಥ ಸಂಬಂಧ? ಇವೆಲ್ಲ ಗಂಭೀರ ಪ್ರಶ್ನೆಗಳು, ಸಾಧಾರಣ ವಿಷಯಗಳೆಂದು ಉದಾಸೀನ ಮಾಡುವಂಥವಲ್ಲ. ಮಾಧ್ಯಮ ಮನಸ್ಸು ಮಾಡಿದರೆ ಇಂಥ ಗಂಭೀರ ಮಾಹಿತಿಯನ್ನು ನಾವು ಅರ್ಥ ಮಾಡಿಕೊಳ್ಳುವ ಬಗೆಯನ್ನೆ ಬದಲಾಯಿಸಬಲ್ಲುದು. ಒಂದರ್ಥದಲ್ಲಿ ಕೇರಳ ಭಾರತದ ಇತರ ಭಾಗಗಳಿಗಿಂತ ಭಿನ್ನ ಎನ್ನುವುದು ಏಕೆ? ಇಡೀ ಭಾರತದ ಸರಾಸರಿಗಿಂತಲೂ ಕೇರಳದಲ್ಲಿ ಜನನ ಕಾಲದಿಂದ ಆಯುಃಪ್ರಮಾಣ ಹತ್ತು ವರ್ಷ ಹೆಚ್ಚಾಗಿರಲು ಏನು ಕಾರಣವಿದ್ದೀತು? ಅಲ್ಲಿ ಶಿಶು ಮರಣ ಸಂಖ್ಯೆ ಅಷ್ಟು ಕಡಿಮೆ ಇರುವುದು ಹೇಗೆ? ಮಹಿಳೆಯರಲ್ಲಿ ಅನಕ್ಷರಸ್ಥರೇ ಇಲ್ಲವೆನ್ನುವುದು ಹೇಗೆ? ವಿಶ್ವ ಬ್ಯಾಂಕ್‌ನ ಯಾರೋ ಒಬ್ಬ ಅರ್ಥಶಾಸ್ತ್ರಿ ಅದೊಂದು ಕೇವಲ ಯೋಗಾಯೋಗವೆಂದು ಹೇಳಿದ ಮಾತ್ರಕ್ಕೆ ಅದು ತಥ್ಯವೆ? ಅಥವಾ ದೀರ್ಘಕಾಲಾವಧಿಯಲ್ಲಿ ಅದರ ಹಿಂದೆ ಏನಾದರೂ ಕಾರಣ ಕೆಲಸ ಮಾಡಿತೋ? ಮೂಲಭೂತ ಪ್ರಜಾಪ್ರಭುತ್ವೀಕರಣಕ್ಕೆ - ಎಡಪಂಥೀಯರು ತಂದ ಭೂಸುಧಾರಣೆಗಳಿಗೆ ಅವರೊಡನೆ ಸಂಬಂಧವಿತ್ತೆ? ಅದು ಸರಿ, ಆದರೆ ಕೇರಳದಲ್ಲಿ ಇದೆಲ್ಲ ಇಷ್ಟು ಚೆನ್ನಾಗಿ ಹೇಗಾಯ್ತು? ಈ ಪ್ರಶ್ನೆಗಳನ್ನು ನೀವೇ ಎತ್ತಿ, ಕೆಲ ಮಟ್ಟಿಗೆ ಅದಕ್ಕೆ ಉತ್ತರಗಳನ್ನು ಕಂಡುಕೊಳ್ಳಬಹುದೆಂದು ಸೂಚಿಸಿದರೆ, ಕ್ರಾಂತಿಕಾರಕ ಬದಲಾವಣೆಗಳಾಗದೆಯೂ, ಆಮೂಲ ಸಾಮಾಜಿಕ

***ಒಂದರ್ಥದಲ್ಲಿ ಕೇರಳ ಭಾರತದ ಇತರ ಭಾಗಗಳಿಗಿಂತ ಭಿನ್ನ ಎನ್ನುವುದು ಏಕೆ? ಇಡೀ ಭಾರತದ ಸರಾಸರಿಗಿಂತಲೂ ಕೇರಳದಲ್ಲಿ ಜನನ ಕಾಲದಿಂದ ಆಯುಃಪ್ರಮಾಣ ಹತ್ತು ವರ್ಷ ಹೆಚ್ಚಾಗಿರಲು ಏನು ಕಾರಣವಿದ್ದೀತು? ಅಲ್ಲಿ ಶಿಶು ಮರಣ ಸಂಖ್ಯೆ ಅಷ್ಟು ಕಡಿಮೆ ಇರುವುದು ಹೇಗೆ? ಮಹಿಳೆಯರಲ್ಲಿ ಅನಕ್ಷರಸ್ಥರೇ ಇಲ್ಲವೆನ್ನುವುದು ಹೇಗೆ?***

ಬದಲಾವಣೆಗಳಾಗದೆಯೂ, ಕೇರಳದ ಅನುಭವದಿಂದಲೆ ಪಾಠ ಕಲಿಯಲು ಸಾಧ್ಯವೆಂದು ನೀವು ಗ್ರಹಿಸಬಹುದು. ಈ ವಿಷಯದಲ್ಲಿ ಮಾಧ್ಯಮ ನಮ್ಮ ಅರಿವನ್ನು ಅಗಾಧವಾಗಿ ಹೆಚ್ಚಿಸಬಲ್ಲದು. ನಮ್ಮಲ್ಲಿ ಒಳನೋಟಗಳಿಗೆ ಬರವಿಲ್ಲ, ಜ್ಞಾನಾನುಭವವೂ ಬೇಕಾದಷ್ಟಿದೆ, ಆದರೆ ಅದು ಜನರಿಗೆ ತಲುಪಬೇಕು ಅಷ್ಟೆ.

**ನಿಯಂತ್ರಣವಿರಲಿ, ಪೋಲಿಸ್ ಕಾವಲಲ್ಲ**

ಮಾಧ್ಯಮ ಸಂಪ್ರದಾಯಗಳೆರಡರ ಮಧ್ಯೆ ಅಭೇದ್ಯ ಗೋಡೆ ಅಡ್ಡವಾಗಿದೆಯೇನೋ ಅನಿಸುತ್ತದೆ ನನಗೆ. ರೇಡಿಯೋ ಮತ್ತು ಟಿ.ವಿ. ಮಟ್ಟಿಗೆ ಹೇಳುವುದಾದರೆ ಉಪಗ್ರಹ ಟಿ.ವಿ.ಗಳಿಂದ ಅಥವಾ ಬಿ.ಬಿ.ಸಿ. ಯ ಭಾರತೀಯ ಕಾರ್ಯಕ್ರಮಗಳಿಂದ ಈಗಾಗಲೇ ಪ್ರಭಾವ ಬೀಳುತ್ತ ಬಂದಿದೆ, ಇವುಗಳ ಜೊತೆಗೆ ಬೇರೆಯವೂ ಇವೆ. ಎಲ್ಲ ರೀತಿಯ ಪ್ರಕಾಶನಗಳ ಆಮದು ಮತ್ತು ವಿತರಣೆಯನ್ನಾಗಲೀ ಅಥವಾ ಎಲ್ಲ ರೀತಿಯ ಕಾರ್ಯಕ್ರಮಗಳನ್ನಾಗಲಿ ನಿರ್ಬಂಧಿಸಬೇಕೆಂದು ನಾನು ಹೇಳುತ್ತಿಲ್ಲ. ಅದನ್ನು ಜನರ ತೀರ್ಮಾನಕ್ಕೆ ಬಿಡಿ. ಹಾಗಿದ್ದರೂ, ನ್ಯಾಯವಾದ ಕೆಲವು ಇತಿಮಿತಿಗಳು ಇರಬೇಕಾದುದು ಅತ್ಯಗತ್ಯ. ಸಿಂಗಪುರದ ದಾರಿಯಲ್ಲಿಯೇ ಸಾಗುತ್ತೇವೆ ಇಲ್ಲವೆ ಸೌದಿ ಅರೇಬಿಯಾದ ದಾರಿ ಅನುಸರಿಸುತ್ತೇವೆಂದರೆ ಸಾಧ್ಯವಿಲ್ಲ. ಅಶ್ಲೀಲತೆ ಅಥವಾ ವಿಪರೀತ ಹಿಂಸೆ ಅಥವಾ ವಿಪರೀತ ಪ್ರಚಾರಗಳಿಗೆ ಸಂಬಂಧಿಸಿದಂತೆ ಸೂಕ್ತ ಶಾಸನಗಳಾಗಲಿ, ಯುಕ್ತವೆನಿಸುವ ಸಹಮತವೇರ್ಪಡಲಿ. ವಿದೇಶೀಯರಾಗಿರಲಿ ಅಥವಾ ಭಾರತೀಯರೇ ಇರಲಿ ಎಲ್ಲೆ ಮೀರಿ ವರ್ತಿಸದಂತೆ ನಿಯಂತ್ರಿಸಲು ಪ್ರಸಾರ ಮಸೂದೆಯಲ್ಲಿ ಬಹುಶಃ ಅವಕಾಶ ಮಾಡಿರಬಹುದು.

**ಭಾರತೀಯ ಪತ್ರಿಕೆಗಳು ತಾವೇ ಬೇರೆ ನಿಂತು ಭಾರತೀಯತೆಯನ್ನು ಉಳಿಸಿಕೊಳ್ಳಬೇಕೆ?**

ಇದು ಚರ್ಚಾಸ್ಪದ ಪ್ರಶ್ನೆ. ಹೀಗೊಂದು ಸಾರ್ವಕಾಲಿಕ ನೀತಿಯಿರಬೇಕೆಂದು ನಾನು ಹೇಳುತ್ತಿಲ್ಲ. ಈ ಚರ್ಚೆಯಲ್ಲಿ ತಾಂತ್ರಿಕ, ವೃತ್ತಿಪರ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ಈ ಎಲ್ಲ ಅಂಶಗಳು ಅಥವಾ ಪರಿಗಣನೆಗಳು ಒಳಗೊಳ್ಳುತ್ತವೆ. ಭಾರತೀಯ ಪತ್ರಿಕಾ ವ್ಯವಸಾಯದ ಸ್ಥಿತಿಗತಿ ಎಲ್ಲಿಗೆ ಮುಟ್ಟಬಹುದು? ಎಲ್ಲರೊಡನೆ ಹೆಗಲೆಣೆಯಾಗಿ ಅದು ಸ್ಪರ್ಧಿಸಬಲ್ಲದೆ? ಅಥವಾ ಅದಕ್ಕೆ ರಕ್ಷಣೆ ಮುಂದುವರಿಯಬೇಕು? ಪ್ರಾದೇಶಿಕ ಪತ್ರಿಕೆಗಳ ಪಾತ್ರವೇನು? – ಉದಾ. ತೆಲುಗು ಪತ್ರಿಕೆಗಳನ್ನು ತೆಗೆದುಕೊಳ್ಳೋಣ. ಅದು ಚೆನ್ನಾಗಿ ಬೆಳೆದೇ ಇಲ್ಲ, 'ಈ ನಾಡು' ಕಂಡ ಯಶಸ್ಸನ್ನು ಬಿಡಿ. ಆರ್ಥಿಕ ಮತ್ತು ವೃತ್ತಿಪರ ಅಭಿವೃದ್ಧಿಗೆ ಪತ್ರಿಕೆಗಳಿಂದ ಪ್ರಭಾವ ಬೀಳುತ್ತಿದೆಯೆ? ವಿದೇಶದಿಂದ ಬಂದ ಯಾರಿಗಾದರೂ ತಿಂಗಳಿಗೆ ರೂ. ಒಂದು ಲಕ್ಷವೋ, ಅದಕ್ಕಿಂತಲೂ ಹೆಚ್ಚಾಗಿಯೋ ಸಂಬಳ ಕೊಡುತ್ತಿದ್ದರೆ ಅಂಥ ನೀತಿಯನ್ನು ನೀವು ಸಮ್ಮತಿಸುತ್ತೀರಾ? ಈ ವ್ಯಕ್ತಿಗಳಿಗೆ ಇಲ್ಲಿ ಯೂರೋಪು, ಬ್ರಿಟಿಷ್ ಅಥವಾ ಅಮೆರಿಕದ ಗಣನೆಯಲ್ಲಿ ಸಂಬಳ ಸಿಗುತ್ತದೆ, ಆದರೆ ಅದೇ ಸಂಸ್ಥೆ ತನ್ನ ಭಾರತೀಯ ನೌಕರರನ್ನು ಬೇರೆಯೇ ಷರತ್ತುಗಳ ಮೇಲೆ ಕೆಲಸಕ್ಕಿಟ್ಟುಕೊಳ್ಳುತ್ತದೆ. ಇಂಥ ಅಸಮಾನತೆಯನ್ನು ಫೈನಾನ್ಷಿಯಲ್ ಟೈಮ್ಸ್ ತೋರುತ್ತಿರುವುದು ನನಗೆ ಗೊತ್ತು. ವಿದೇಶೀಯರಿಗಿಂತ ಎಷ್ಟೋ ಪಾಲು ಸಮರ್ಥರು, ಪ್ರತಿಭಾನ್ವಿತರು ಅಥವಾ ಅರ್ಹತೆಗಳಿಸಿದವರು ಕೆಲವರು ಇದ್ದರೂ, ಬಹುಶಃ ಒಬ್ಬ ಉತ್ತಮ ಲೇಖಕ, ಅಂಥವರು ಇಲ್ಲಿಯವರಾಗಿದ್ದಾರೆಂಬ ಒಂದೇ ಕಾರಣಕ್ಕೆ ಅವರಿಗೆ ಕಡಿಮೆ ಸಂಬಳ ಸಿಗುತ್ತಿದೆ. ಇದರಿಂದ ಭಾರತೀಯ ಪತ್ರಿಕೋದ್ಯಮಿಗಳ ನೈತಿಕತೆಗೆ ಎಂಥ ಧಕ್ಕೆ ತಟ್ಟುತ್ತದೆಂದು ನೀವೇ ಊಹಿಸಿಕೊಳ್ಳಿ. ಇನ್ನು ರಾಜ್ಯಾಂಗದ ವಿಷಯ. ಅದರ 19ನೇ ಪರಿಚ್ಛೇದದಲ್ಲಿ ಹೇಳಿದ ವಾಕ್ ಮತ್ತು ಅಭಿವ್ಯಕ್ತಿಸ್ವಾತಂತ್ರ್ಯವನ್ನು ಜ್ಞಾಪಿಸಿಕೊಳ್ಳಿ. ಈ ಮೂಲಭೂತ ಹಕ್ಕು ಭಾರತೀಯ ನಾಗರಿಕರಿಗೆ ಮಾತ್ರ ಲಭ್ಯ, ಬೇರೆಯವರಿಗಿಲ್ಲ ಎಂದು ಅದು ದೃಢಪಡಿಸಿದೆ. ಯಾರಾದರೂ ಮೂಲಭೂತವಾದವನ್ನು ಪ್ರತಿಪಾದಿಸುತ್ತಿದ್ದರೆ ಆಗ ಏನು ಮಾಡುತ್ತೀರಿ? ನಾನಂತೂ ಪರಕೀಯ ದ್ವೇಷಿಯಲ್ಲ. ಕಾಶ್ಮೀರ ವಿವಾದಕ್ಕೆ ಸಂಬಂಧಿಸಿದಂತೆ ತೀರಾ ಬದ್ಧತೆಯುಳ್ಳವರನ್ನೂ ಅವರು ಏನು ಹೇಳುತ್ತಾರೋ ಕೇಳಬಹುದಲ್ಲವೆ? ಪ್ರಸಕ್ತ ಸನ್ನಿವೇಶದಲ್ಲಿ ಅವರೊಂದಿಗೆ ಮುಖಾಮುಖಿ ನಡೆಸಬಹುದು. ಆದರೆ ಅವರೇ ಭಾರತದಲ್ಲಿ ವಾರ್ತಾಪತ್ರ ನಡೆಸುತ್ತೇವೆಂದರೆ ಅದನ್ನು ಒಪ್ಪಿಕೊಳ್ಳುವುದಾಗಲಿ ಸಮರ್ಥಿಸುವುದಾಗಲಿ ಆಗದ ಮಾತು.

*ಎನ್. ರಾಮ್ ರವರು ದಿ ಹಿಂದೂ – ಬಿಸಿನೆಸ್ ಲೈನ್, ಫ್ರಂಟ್‌ಲೈನ್ ಮತ್ತು ಸ್ಪೋರ್ಟ್‌ಸ್ಟಾರ್ ಪತ್ರಿಕೆಗಳ ಸಂಪಾದಕರು. ನಮೀದಿಯಾ ಫೌಂಡೇಷನ್, ಫ್ರೆಡ್‌ರಿಕ್ ಎಬರ್ಟ್ ಸ್ಟಿಫ್‌ಟಂಗ್, ಆ್ಯಕ್ಷನ್ ಏಡ್ ಮತ್ತು ಮಾಧ್ಯಮ್ ಜೊತೆಗೂಡಿ, ಮಾಧ್ಯಮಗಳು, ಜಾಗತೀಕರಣ ಮತ್ತು ಸಮಾಜದ ಮೇಲೆ ಅದರ ಪ್ರಭಾವ ಈ ವಿಚಾರವಾಗಿ ಏರ್ಪಡಿಸಿದ ವಿಚಾರ ಸಂಕಿರಣದಲ್ಲಿ ಅವರು ಮಾಡಿದ ಭಾಷಣದ ಆಯ್ದಭಾಗಗಳನ್ನು ಇಲ್ಲಿ ಕೊಟ್ಟಿದೆ.*

*ಅನುವಾದ : ಎನ್. ವಿಶ್ವನಾಥ್*

# ಭಾರತದಲ್ಲಿ ಇಂದು ಪತ್ರಿಕೆಗಳು - ಆದ್ಯತೆಗಳು ಮತ್ತು ಪೂರ್ವಾಗ್ರಹಗಳು

- ಅಮ್ಮು ಜೋಸೆಫ್

ಆರ್ಥಿಕ ಉದಾರೀಕರಣ ಮತ್ತು ಜಾಗತೀಕರಣದ ಯುಗವೆಂದು ಜನಜನಿತವಾಗಿರುವ ಈ ಕಾಲಮಾನದಲ್ಲಿ ಭಾರತೀಯ ಪತ್ರಿಕೆಗಳು ಎಂಬ ವಿಚಾರ ಕುರಿತು ನನಗೆ ಮಾತನಾಡಲು ಹೇಳಿದ್ದಾರೆ.

ನನಗಿರುವ ಅರ್ಥಶಾಸ್ತ್ರದ ಜ್ಞಾನ ನಿಸ್ಸಂಶಯವಾಗಿ ಮುಷ್ಟಿಯಲ್ಲಿ ಹಿಡಿಯುವಷ್ಟು ಎಂದು ವಿಷಾದದಿಂದ ಮೊದಲಿಗೇ ಒಪ್ಪಿಕೊಳ್ಳುತ್ತೇನೆ. ಆದ್ದರಿಂದ ನನ್ನ ಮಾತುಗಳನ್ನು ನಾನು ಈ ಹಿಂದಿನ ಕೆಲವು ವರ್ಷಗಳಲ್ಲಿ ಕಾಣುತ್ತಾ ಬಂದ ಪತ್ರಿಕೆಗಳ ಕೆಲವು ಒಲವುಗಳನ್ನು ಎತ್ತಿ ಹೇಳುವುದಕ್ಕಷ್ಟೆ ಸೀಮಿತಗೊಳಿಸುತ್ತೇನೆ. ಈ ಒಲವುಗಳಿಗೂ ಮತ್ತು 1980ರ ದಶಕದಲ್ಲಿ ಮತ್ತು 1990ರ ದಶಕದ ಪ್ರಾರಂಭದಲ್ಲಿ ಬಂದ ಹೊಸ ಆರ್ಥಿಕ ವಾತಾವರಣದಿಂದ ಸಾಮಾಜಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಸನ್ನಿವೇಶದಲ್ಲಿ ಉಂಟಾದ ಬದಲಾವಣೆಗೂ, ಆಂಶಿಕವಾಗಿದ್ದರೂ, ಸಂಬಂಧವಿದೆಯೆಂಬುದು ನನ್ನ ನಂಬಿಕೆ.

ಭಾರತೀಯ ಪತ್ರಿಕಾಲೋಕ ತನ್ನ ಇತಿಹಾಸದ ವಿವಿಧ ಕಾಲಾವಧಿಗಳಲ್ಲಿ ತೀವ್ರಗಾಮಿಯಾಗಿ ಮತ್ತು ಸಂಪ್ರದಾಯ ಶರಣವಾಗಿ ಹಲವು ಪಾತ್ರಗಳನ್ನು ನಿಭಾಯಿಸಿಕೊಂಡು ಸಾಗಿ ಬಂದಿದೆ : ರಾಷ್ಟ್ರೀಯತಾ ಆಂದೋಳನ ನಡೆಯುತ್ತಿದ್ದಾಗ ಅದು ಕ್ರಾಂತಿಕಾರಕ ಉತ್ಸಾಹವನ್ನು ಮೆರೆದಿದ್ದರೆ, ಈಗ ಸ್ವಾತಂತ್ರ್ಯೋತ್ತರ ವರ್ಷಗಳಲ್ಲಿ ಅತ್ತಿತ್ತ ನೋಡದ ಸ್ವಸಂತುಷ್ಟಿಯಲ್ಲಿ ಮುಳುಗಿ ಹೋಗಿದೆ, ತುರ್ತು ಪರಿಸ್ಥಿತಿಯನ್ನು ಹೇರಿದಾಗ ಪ್ರಜಾಪ್ರಭುತ್ವ ಮತ್ತು ಸಾಮಾಜಿಕ ನ್ಯಾಯಕ್ಕಾಗಿ ಕಟಿಬದ್ಧವಾಗಿ ಸೆಟೆದು ಎದ್ದು ನಿಂತಿದ್ದರೆ ಇತ್ತೀಚಿನ ದಿನಗಳಲ್ಲಿ ಆವರಿಸಿಕೊಂಡು ಬರುತ್ತಿರುವ ಆರ್ಥಿಕ 'ಉದಾರೀಕರಣ' ಮತ್ತು 'ಜಾಗತೀಕರಣ'ಗಳ ಶುಧ್ಧಾಂಗವಾದ ಸಂಭ್ರಮೋತ್ಸಾಹದಲ್ಲಿ ಮತ್ತು ಅವುಗಳ ಉನ್ಮಾದಕಾರಕ ಫಲಗಳನ್ನು ಉಣ್ಣುವುದರಲ್ಲಿ ಮೈಮರೆತಿದೆ.

ಭಾರತದ ಪತ್ರಿಕೆಗಳು ಪ್ರಸ್ತುತ ಯಾವ ಘಟ್ಟದಲ್ಲಿವೆಯೆಂಬ ವಿವರಗಳಿಗೆ ಬರುವ ಮುನ್ನ ಬೃಹತ್ ರಾಷ್ಟ್ರವಾಗಿ ಒಂದು ಉಪಖಂಡವೇ ಎನಿಸಿರುವ ಭಾರತದಲ್ಲಿನ ಏನನ್ನೇ ಕುರಿತು ಮತ್ತು ಅದರಲ್ಲಿ ಸೇರಿದಂತೆಯೇ ಅದರ ಪತ್ರಿಕೆಗಳ ಕುರಿತು ಸಾಮಾನ್ಯೀಕರಿಸಿ ಹೇಳುವ ಕಷ್ಟ ಏನು, ಅಪಾಯಗಳೇನು ಎಂದು ನನಗೆ ಗೊತ್ತು ಎಂದು ಒಪ್ಪಿಕೊಳ್ಳುತ್ತೇನೆ, ಏಕೆಂದರೆ ನಮ್ಮ ದೇಶದ ಬಹು ಸಾಂಸ್ಕೃತಿಕ ಸಂಕೀರ್ಣ ಸಮಾಜದಲ್ಲಿರುವಂತೆಯೇ ಪತ್ರಿಕೆಗಳಲ್ಲಿಯೂ ಅದೆಷ್ಟೋ ಪದರುಗಳಿವೆ, ಅದೆಷ್ಟೋ ವಿಭಿನ್ನತೆಗಳಿವೆ. ಹಾಗೆಯೇ, ಸಾಮಾನ್ಯ ಪ್ರವೃತ್ತಿಗಳ ಜಿಜ್ಞಾಸೆ ಮಾಡುವಾಗ ಅವುಗಳಿಗೆ ಎಲ್ಲ ಕಾಲಕ್ಕೂ ಅಪವಾದಗಳೂ ಇರುತ್ತವೆಂಬುದನ್ನು ಗಮನಿಸಬೇಕಾದುದೂ ಸಹ ಮುಖ್ಯ.

ಇದೇ ಅಲ್ಲದೆ, ನಾನು ಈ ದೇಶದ ಜನರಲ್ಲಿ ಅತ್ಯಧಿಕ ಸಂಖ್ಯೆಯ ಜನರಿಗೆ ತಲುಪುವ ಪತ್ರಿಕೆಗಳ ಕುರಿತು, ಅಂದರೆ ಸ್ಥಳೀಯ ಭಾಷೆಗಳಲ್ಲಿರುವ ಪತ್ರಿಕೆಗಳು ಮತ್ತು ನಿಯತಕಾಲಿಕಗಳ ಕುರಿತು ಅಧಿಕಾರಯುತವಾಗಿ ಮಾತನಾಡಬಲ್ಲೆನೆಂಬ ಸಾಹಸ ಮಾಡಲಾರೆ; ಏಕೆಂದರೆ ಆ ಭಾಷೆಗಳ ವಿಚಾರಕ್ಕೆ ನಾನು ಅಜ್ಞ. ಆದ್ದರಿಂದ ನನ್ನ ಮಾತುಗಳನ್ನು ರಾಷ್ಟ್ರೀಯ ಅಥವಾ ಮುಖ್ಯವಾಹಿನಿಗೆ ಸೇರಿದ್ದೆಂದು ಗುರುತಿಸುವ, ಅಥವಾ ಹಾಗೇ ತಪ್ಪಾಗಿ ಗುರುತಿಸುವ, ಇಂಗ್ಲಿಷ್ ಪತ್ರಿಕೆಗಳಿಗೆ ಸೀಮಿತಗೊಳಿಸುತ್ತೇನೆ.

ಈ ಇಂಗ್ಲಿಷ್ ಪತ್ರಿಕೆಗಳ ಓದುಗರನ್ನು ಭಾರತೀಯ ಭಾಷೆಗಳ ಅಂದರೆ ಇಲ್ಲಿಯ ಪ್ರಾದೇಶಿಕ ಭಾಷಾ ಪತ್ರಿಕೆಗಳ ಓದುಗರಿಗೆ ಹೋಲಿಸಿದರೆ ಎಲ್ಲೋ ಒಂದು ಚಿಕ್ಕ ಅಂಶವನಿಸಿದರೂ, ಇಂಗ್ಲಿಷ್ ಪತ್ರಿಕೆಗಳು ತಮ್ಮ ವಾಚಕವೃಂದದ ಹೊರಗೂ ಪ್ರಭಾವ ಬೀರಲು ಶಕ್ತವಾಗಿರುವುದೇ ಅಲ್ಲದೆ ಉಳಿದವಕ್ಕೆ ಕೆಲ ಮಟ್ಟಿದೆ ದಾರಿ ಹಾಕಿಕೊಡುವಷ್ಟು ಸಮರ್ಥವಾಗಿರುವುದನ್ನು ಎಲ್ಲರೂ ಒಪ್ಪುತ್ತಾರೆ.

ಪತ್ರಿಕೆಯ ಯಾವುದೇ ಪೂರ್ವಗ್ರಹಗಳಿರಲಿ ಯಾವುದೇ ಆದ್ಯತೆಗಳಿರಲಿ ಅವುಗಳನ್ನು ಹೆಚ್ಚು ಕಡಿಮೆ ನಿರ್ಧರಿಸುವ ಪ್ರಮುಖ ಅಂಶಗಳಲ್ಲಿ ಪತ್ರಿಕೆಯನ್ನು ಯಾರು



ನಡೆಸುತ್ತಾರೆಂಬುದೂ ಮುಖ್ಯ ಅಂಶ ಎಂದು ನನ್ನ ನಂಬುಗೆ. 'ರಾಷ್ಟ್ರೀಯ' ಎಂದು ಕರೆಸಿಕೊಳ್ಳುವ ಇಂಗ್ಲಿಷ್ ಭಾಷಾ ಪತ್ರಿಕೆಗಳಲ್ಲಿ ಉಳಿದವರಿಗಿಂತ ಹೆಚ್ಚು ಶ್ರೀಮಂತರಾದ, ವಿಶ್ವವಿದ್ಯಾಲಯಗಳಲ್ಲಿ ಓದಿದ, ಮೇಲ್ಜಾತಿಯ, ನಗರಗಳಿಂದ ಬಂದ ಪುರುಷರೇ ಹೆಚ್ಚಾಗಿ ತುಂಬಿಕೊಂಡಿರುವುದು ಗಮನಾರ್ಹವಾಗಿದ್ದರೂ ಕಳೆದ ಒಂದೆರಡು ದಶಕಗಳಲ್ಲಿ ಈ ವೃತ್ತಿಗೆ ಮಹಿಳೆಯರು ಹೆಚ್ಚು ಸಂಖ್ಯೆಯಲ್ಲಿ ಸೇರಿರುವುದು ಕಾಣಬರುತ್ತದೆ, ಇವರಲ್ಲಿ ಕೆಲವರು ಜವಾಬ್ದಾರಿಯುತ ಸ್ಥಾನಗಳಿಗೆ ಏರಿದ್ದಾರೆ (ಆದರೆ ಉತ್ತುಂಗ ಸ್ಥಾನಗಳಿಗೆ ಇನ್ನೂ ಮುಟ್ಟಿಲ್ಲ). ಅಂದರೆ ಈ ಪತ್ರಿಕಾ ವರ್ಗ ಒಟ್ಟಾರೆಯಾಗಿ ಉದಾರ-ವೆನ್ನಬಹುದಾದ ಆದರೆ ಸಮಾಜದ ಈ ವರ್ಗ ಸಮರ್ಥಿಸುವ ಗಣ್ಯರ ನಾಯಕತ್ವವಾದಿ ಮೌಲ್ಯಗಳಿಗೆ ತಾನೂ ತಕ್ಕಮಟ್ಟಿಗೆ ತಾಳ ಹಾಕಿಕೊಂಡು ಬಂದಿದೆ.




ಇಷ್ಟು ಹೇಳಿದ ಮೇಲೆಯೂ, ಅದೇ ಪತ್ರಿಕೆಗಳಲ್ಲ ಅಭಿವೃದ್ಧಿ, ಮಾನವ ಹಕ್ಕುಗಳು ಮತ್ತು ಸಾಮಾಜಿಕ ನ್ಯಾಯ ಇಂಥ ವಿಷಯಗಳಿಗೆ ಸಂಬಂಧಿಸಿದಂತೆ ಇರುವ ಸಮಸ್ಯೆಗಳನ್ನು ಮತ್ತು ನಡೆದ ಘಟನೆಗಳನ್ನು ವಸ್ತು ನಿಷ್ಠವಾಗಿ ಎತ್ತಿ ಹೇಳಬೇಕಾದುದು ತಮ್ಮ ವೃತ್ತಿಪರ ಕರ್ತವ್ಯವೆಂದು ಬಗೆಯುವ ಪತ್ರಿಕಾಕರ್ತರು ಇದ್ದೇ ಇದ್ದಾರೆಂಬುದನ್ನು ಒಪ್ಪಿಕೊಳ್ಳಬೇಕು ; ಹಾಗಾಗಿ, ಒಟ್ಟನಲ್ಲಿ ಹೇಳುವುದಾದರೆ ತೊಂದರೆಗೆ ಸಿಲುಕಿದವರ ಮತ್ತು ನಿರ್ಲಕ್ಷ್ಯಕ್ಕೀಡಾದವರ ಕಷ್ಟ-ಕಾರ್ಪಣ್ಯಗಳಿಗೆ ಆಶೋತ್ತರಗಳಿಗೆ ಅವರು ಹಲವಾರು ಸಲ ಅವುಗಳಲ್ಲಿ ದನಿ ಮೂಡಿಸುವುದು ಸಾಧ್ಯವಾಗಿದೆ.

ಆದರೂ, ಪತ್ರಿಕೆಗಳಲ್ಲಿ ತೀರ್ಮಾನ ಕೈಗೊಳ್ಳುವ ವರ್ಗದ ಹಿತವೇ ಯಾವಾಗಲೂ ಮೇಲುಗೈಯ್ಯಾಗುವುದು ಸುಸ್ಪಷ್ಟ. ಅತ್ಯಂತ ಅನುಕೂಲ ಕಾಲವಿತ್ತು ಎನ್ನುವಾಗಲೂ ವ್ಯಾಪಾರ ವ್ಯವಹಾರಗಳನ್ನು ಮತ್ತು ಕಾರ್ಪೊರೇಟ್ ಸಂಸ್ಥೆಗಳ ವಿದ್ಯಮಾನಗಳನ್ನು ವರದಿ ಮಾಡಲು ವರದಿಗಾರರ ತಂಡ ತಂಡಗಳನ್ನೆ ಕಳುಹಿಸುತ್ತಿದ್ದಾರೆ, ಕಾರ್ಮಿಕರ ಅನುಭವಗಳನ್ನು ಅನಿಸಿಕೆಗಳನ್ನು ವರದಿ ಮಾಡುವ ಜವಾಬ್ದಾರಿ ಹೊತ್ತ ವರದಿಗಾರರಿದ್ದ ಪತ್ರಿಕೆ ಹೆಸರಿಗಾದರೂ ಇರಲಿಲ್ಲವೆಂಬುದನ್ನು ನೋಡಿದಾಗ ಈ ಮಾತು ಇನ್ನಷ್ಟು ನಿಚ್ಚಳವಾಗುತ್ತದೆ. ಅಲ್ಲೊಂದು ಇಲ್ಲೊಂದು ಬಿಟ್ಟರೆ ಎಲ್ಲ ಪತ್ರಿಕೆಗಳಿಗೂ ದೊಡ್ಡ' ದೊಡ್ಡ ವ್ಯಾಪಾರಿ ಸಂಸ್ಥೆಗಳೇ ಮಾಲೀಕರಾಗಿರುವಾಗ ಇದೇನೂ ಆಶ್ಚರ್ಯವಲ್ಲ.

ಬಹಳಷ್ಟು ಪತ್ರಿಕೆಗಳು ಮತ್ತು ಪತ್ರಿಕಾಕಾರರು ಹಿಂದು ಮುಂದು ನೋಡದೆ, ಯಾವ ಎಗ್ಗೂ ಇಲ್ಲದೆ ಅತ್ಯುತ್ಸಾಹದಿಂದ ತಥಾಕಥಿತ 'ಉದಾರೀಕರಣ' ಮತ್ತು 'ಜಾಗತೀಕರಣ' ಪ್ರಕ್ರಿಯೆಗಳನ್ನು ಕೊಂಡಾಡುತ್ತಿರುವುದಕ್ಕೆ ಕಾರಣವೇನಿದ್ದೀತು ಎಂಬ ಪ್ರಶ್ನೆಗೆ ಈ ರಾಷ್ಟ್ರೀಯ ಪತ್ರಿಕೆಗಳಲ್ಲಿರುವವರ ಆರ್ಥಿಕ ಮತ್ತು ಸಾಮಾಜಿಕ ಪರಿಸ್ಥಿತಿಯನ್ನು ನೋಡಿದಾಗ ಉತ್ತರ ತಾನೇ ಸಿಗುತ್ತದೆ. ಎಷ್ಟಾದರೂ ಅವರೆಲ್ಲರೂ, ಅಥವಾ ನಾವುಗಳು ಎನ್ನಿ, ಮಧ್ಯಮ ಮತ್ತು ಮೇಲ್ವರ್ಗದ ಗ್ರಾಹಕರು ; ಹೊಸ ನೀತಿಗಳು ಮತ್ತು ಇತ್ತೀಚಿನ ಬಜೆಟ್‌ಗಳು, ತೆರಿಗೆ ವಿನಾಯಿತಿಗಳು ಮತ್ತು ಆಮದು ಸುಂಕ ರದ್ದತಿ,ಹಿಂದೊಮ್ಮೆ 'ಐಷಾರಾಮಿ ವಸ್ತುಗಳು' ಎನಿಸಿದ್ದವೂ ಸೇರಿದಂತೆ ಉಪಭೋಗ ವಸ್ತುಗಳ ಮಹಾಪೂರ, ಮತ್ತು ಹಿಂದೆ ನಮ್ಮ ಜೀವನ ಶೈಲಿಗಳಿಗೆ ತೊಡಕಾಗುತ್ತಿದ್ದ ಹಲವಾರು ಹತೋಟಿಗಳನ್ನು ಸಡಿಲಗೊಳಿಸಿರುವುದು ಇವೆಲ್ಲದರ ಲಾಭ ದಕ್ಕಿರುವುದು ನಮಗೇ ಅಲ್ಲವೆ?

ಕಳೆದ ಸುಮಾರು ಒಂದು ದಶಕದಲ್ಲಿ ಭಾರತದ ಪತ್ರಿಕೆಗಳ ವ್ಯಕ್ತಿತ್ವ ಗಮನಾರ್ಹವಾಗಿ ಬದಲಾವಣೆಗೆ ಈಡಾಗುತ್ತಾ ಬಂದಿದೆ. ಪರಸ್ಪರವಾಗಿ ಬಲ ಹೆಚ್ಚಿಸಿಕೊಳ್ಳುತ್ತಿರುವ ಎರಡು ವಿದ್ಯಮಾನಗಳು ಅವುಗಳನ್ನು ತರುಬುತ್ತಿವೆ : ಒಂದು ಎಲೆಕ್ಟ್ರಾನಿಕ್ ಮಾಧ್ಯಮದ ಬೆಳವಣಿಗೆ, ಇನ್ನೊಂದು 'ಜಾಗತೀಕರಣ' ಪ್ರಕ್ರಿಯೆಯ ಮುಷ್ಟಿಯಲ್ಲಿ ಸಿಕ್ಕಿ ಹೆಚ್ಚು ಹೆಚ್ಚಾಗಿ ಉಪಭೋಗವಾದವನ್ನೆ ಸ್ವಭಾವವಾಗಿ ಮಾಡಿಕೊಳ್ಳುತ್ತಿರುವ ಭಾರತೀಯ ಆರ್ಥಿಕತೆ (ಜಾಗತೀಕರಣ ಪ್ರಕ್ರಿಯೆ 1990 ರ ದಶಕಾರಂಭದಲ್ಲಿ ವಿಧ್ಯುಕ್ತಗೊಂಡವೇನೋ ಸರಿ, ಆದರೆ ಅದು 1980ರ ದಶಕದ ಮಧ್ಯಭಾಗದಿಂದಲೇ ಅನಧಿಕಾರಯುತವಾಗಿ ಪ್ರಾರಂಭಗೊಂಡಿತ್ತು.

ಈ ನಮ್ಮ ದೇಶಕ್ಕೆ ಟಿ.ವಿ. 'ಶಿಕ್ಷಣ, ಗ್ರಾಮಾಭಿವೃದ್ಧಿ ಮತ್ತು ಸಮುದಾಯ ಅಭಿವೃದ್ಧಿಗಳ ಮಾಧ್ಯಮ'ವಾಗಿ ಬಂದಿತೇನೋ ಸರಿ, ಆದರೆ ನಮಗೆಲ್ಲರಿಗೂ ಗೊತ್ತಿರುವಂತೆ ಇವತ್ತು ಅದು ಪ್ರಧಾನವಾಗಿ ಮನರಂಜನೆಯ ಮಾಧ್ಯಮವಾಗಿ ಹೋಗಿದೆ. ದೂರದರ್ಶನ ವಾಣಿಜ್ಯಕರಣವಾಗಿರುವುದು, ದೇಶೀಯ ಮತ್ತು ಅಂತಾರಾಷ್ಟ್ರೀಯ ಖಾಸಗೀ ವಾಹಿನಿಗಳು ಹುಟ್ಟಿಕೊಂಡು ವ್ಯಾಪಿಸಿದ್ದು, ಮತ್ತು ತತ್ಪರಿಣಾಮವಾಗಿ ಜಾಹಿರಾತಿನ ಮಾಧ್ಯಮವಾಗಿ ಟಿ.ವಿ.ಗೆ ಸಿಕ್ಕಿದ ಪ್ರಾಬಲ್ಯ ಇವೆಲ್ಲವುಗಳ ಪ್ರಾಭಾವ ಪತ್ರಿಕೆಗಳ ಮೇಲೆ ಹೆಚ್ಚಾಗಿಯೇ ಬಿದ್ದು, ಪತ್ರಿಕಾ ಆರ್ಥಿಕತೆಯೂ ಮರುಚಿಂತನೆಗೆ ಒಳಗಾಗಬೇಕಾಯ್ತು. ದೊಡ್ಡ ವೃತ್ತ ಪತ್ರಿಕಾ ಶೃಂಖಲೆಗಳು ಬೇರೆ ಬೇರೆ ದಾರಿಗಳನ್ನು ಹುಡುಕಲೇಬೇಕಾಗಿ

ಬಂದು ಅನೇಕರು ಟೆಲಿವಿಷನ್ ಕಂಪನಿಗಳಲ್ಲಿಯೂ ಹಣ ಹೂಡಿದ್ದಾರೆ.

ಆದೇ ಕಾಲಕ್ಕೆ, ಮುದ್ರಿತ ರೂಪದ ಜಾಹಿತಾರನ್ನು ಆದಷ್ಟು ಹೆಚ್ಚು ದಕ್ಕಿಸಿಕೊಳ್ಳುವುದಕ್ಕೋಸ್ಕರ ಪ್ರತಿಯೊಂದು ವೃತ್ತಪತ್ರಿಕೆಯೂ ವಾಣಿಜ್ಯ ದೃಷ್ಟಿಯಿಂದ ಹೆಚ್ಚು ಆಕರ್ಷಕವಾಗಿ ಕಾಣುವಂತಾಗಲು ಹೊಸ ಹೊಸ ದಾರಿಗಳನ್ನು ಹುಡುಕಬೇಕಾಯ್ತು. ಕಳೆದ ಒಂದು ವರ್ಷದಿಂದೀಚೆಗೆ ಬೆಂಗಳೂರಿನಲ್ಲಿರುವ ನಾವೆಲ್ಲ ನೋಡುತ್ತಿರುವ ಹಾಗೆ ವೃತ್ತಪತ್ರಿಕೆಗಳಲ್ಲಿ ಬಣ್ಣದ ಛಾಯಾಚಿತ್ರಗಳಿರುವುದು ಇಂಥ ಪ್ರಯತ್ನಕ್ಕೆ ಒಂದು ಉದಾಹರಣೆ. ಸಂಪಾದಕೀಯ ಲೇಖನಗಳ ವಸ್ತುವನ್ನು ಸತ್ತ್ವಗುಂದಿಸುತ್ತಿರುವುದು ಸಹ ಮತ್ತೊಂದು ವಿಚಾರ.

ಹೀಗೆ ಹುಟ್ಟಿಕೊಂಡ ಆತಂಕದ ಪರಿಣಾಮವಾಗಿ ಹಿಂದೆ ಪತ್ರಿಕಾ ಸಿಬ್ಬಂದಿಯ ಸಂಪಾದನೆ ವಿಭಾಗ ಮತ್ತು ವಾಣಿಜ್ಯ ವಿಭಾಗಗಳನ್ನು ಬೇರ್ಪಡಿಸಿ ಎಳೆದಿರುತ್ತಿದ್ದ ಲಕ್ಷ್ಮಣ ರೇಖೆ ಮಸುಕಾಗುತ್ತಿದೆ. ಎರಡು ದಶಕಗಳ ಹಿಂದೆ ಪ್ರಮುಖ ವೃತ್ತ ಪತ್ರಿಕಾ ಕಂಪನಿಗಳ ಸಂಪಾದಕೀಯ ವಿಭಾಗಗಳಲ್ಲಿ ಜಾಹಿರಾತು ವಿಭಾಗಗಳ ಸಿಬ್ಬಂದಿ ಜನರನ್ನು ಕಾಣುವುದೇ ದುರ್ಲಭವಾಗಿತ್ತು; ಬಹುಪಾಲು ಸಂಪಾದಕರಿಗೂ ವಾಣಿಜ್ಯ ವಿಭಾಗದವರಿಗೂ ಸಂಬಂಧವೇ ಇರಲಿಲ್ಲವೆನ್ನುವಾಗ ಇನ್ನು ಅವರು ಅದರಲ್ಲಿ ಕೈ ಹಾಕುವ ಮಾತೆಲ್ಲಿ? ಆದರೆ, ಈಗ ಅನೇಕ ಪತ್ರಿಕೆಗಳಲ್ಲಿ ಸಂಪಾದಕರು ಮತ್ತು ಜಾಹಿರಾತು ಕಾರ್ಯ ನಿರ್ವಾಹಕರು ಜೊತೆ ಜೊತೆಯಾಗಿ ಕುಳಿತು ಪತ್ರಿಕೆಗೆ ಹೇಗೆ ಹೆಚ್ಚು ಹೆಚ್ಚು ಜಾಹಿರಾತು ಆಕರ್ಷಿಸಿ ಆದಾಯ ಸಂಪಾದನೆಗೆ ಮಾರ್ಗ ಮಾಡಬಹುದು ಎಂದು ಆಲೋಚಿಸುತ್ತಾರೆ.




ಯಾವುದೇ ಪ್ರಕಾಶನದ ಸಂಪಾದಕೀಯ ಮತ್ತು ಜಾಹಿರಾತು ವಿಭಾಗಗಳಿಗೆ ಪತ್ರಿಕೆಯ ಪ್ರಸಾರ ಹೆಚ್ಚಿಸಬೇಕು ಮತ್ತು ಆದಾಯವನ್ನು ಗಟ್ಟಿ ಮಾಡಿಕೊಳ್ಳಬೇಕೆಂಬ ಇಬ್ಬರಿಗೂ ಸಮಾನ್ಯವಾದ, ನ್ಯಾಯವಾದ ಆಸಕ್ತಿಯಿದ್ದಾಗಲೂ, ಹಿಂದೆ ಅವೆರಡೂ ತಮ್ಮ ತಮ್ಮದೇ ಪ್ರೇರಣೆಯಿಂದ ಸ್ವತಂತ್ರವಾಗಿ ತಮ್ಮ ತಮ್ಮ ಪ್ರಯತ್ನದಲ್ಲಿ ತೊಡಗುತ್ತಿದ್ದವು. ಈಗ ನೋಡಿದರೆ ಆದಾಯಗಳಿಸುವುದಕ್ಕೂ ಸಂಪಾದಕೀಯ ನೀತಿ ಮತ್ತು ಆಚರಣೆಗೂ ತಳುಕು ಹಾಕುತ್ತಿರುವುದು ಪತ್ರಿಕಾ ಪ್ರಾಮಾಣಿಕತೆಯ ದೃಷ್ಟಿಯಿಂದ ಸ್ವಲ್ಪ ಗಂಭೀರ ಸ್ವರೂಪದ್ದೇ ಆಗಿದೆಯೆನ್ನಬೇಕು.

ಈ ಗಾಳಿ ಬೀಸಿ ನಿಂತು ಹೋಗುವುದಲ್ಲ, ಇದೇ ದಿಕ್ಕಿನಲ್ಲಿ ಬೀಸುತ್ತಲೇ ಹೋಗುತ್ತದೆಂಬುದು ಸ್ಪಷ್ಟ. ಒಂದೆರಡು ವರ್ಷಗಳ ಹಿಂದೆ ಪತ್ರಿಕಾ ಶಾಸ್ತ್ರದ ಒಬ್ಬ ವಿದ್ಯಾರ್ಥಿ ನನ್ನೊಂದಿಗೆ, ತನ್ನ ಶಿಕ್ಷಣಾವಧಿಯ ಪ್ರಾರಂಭದಲ್ಲಿ ವಿದ್ಯಾರ್ಥಿಗಳನ್ನು ಉದ್ದೇಶಿಸಿ ಮಾತನಾಡಿದ ಒಬ್ಬರು ಪತ್ರಿಕಾ ಶಾಸ್ತ್ರವೂ ಒಂದು ವಾಣಿಜ್ಯ ವ್ಯವಹಾರವನ್ನು ಕುರಿತದ್ದೇ ಎಂದು ಪ್ರಸ್ತಾಪಿಸಿದ್ದನ್ನು ತಿಳಿಸಿದ. ಪತ್ರಿಕೋದ್ಯಮವೆಂದಾಗ, ಅದೊಂದು ವ್ಯವಹಾರ ಎನ್ನುವುದು ನನಗೆ ಗೊತ್ತಿದ್ದ ವಿಚಾರವೇ, ಆದರೆ ಪತ್ರಿಕಾಶಾಸ್ತ್ರವೇ ಒಂದು ವ್ಯವಹಾರವಾಗಿ ಬಿಡುತ್ತದೆಂದು ನನಗೆ ಅರಿವಾಗಿರಲಿಲ್ಲ.

ಇವತ್ತು ತಮ್ಮ ಪ್ರಕಟಣೆಗಳನ್ನು ಬಳಕೆ ವಸ್ತುಗಳಾದ ಸಾಬೂನು, ಶಾಂಪೂ ಇತ್ಯಾದಿಗಳ ಹಾಗೆ ಇವೂ ಕೂಡ ಎಂದು ಹೆಮ್ಮೆಯಿಂದ ವರ್ಣಿಸುವ ಪತ್ರಿಕಾ ಮಾಲೀಕರು ನಮ್ಮಲ್ಲಿದ್ದಾರೆ. ಅದೇ ಅವರು ಒಬ್ಬ ಪತ್ರಿಕಾಕಾರನಿಗೂ ಒಬ್ಬ ನಿರ್ವಾಹಕನಿಗೂ ಇಬ್ಬರ ಕೆಲಸ'ಕಾರ್ಯ'ಗಳಲ್ಲಿ, ಅಗತ್ಯಗಳಲ್ಲಿ ತಮಗೆ ವ್ಯತ್ಯಾಸವೇನೂ ಕಾಣದು ಎಂತಲೂ ಪ್ರಕಟವಾಗಿಯೇ ಆಡುತ್ತಾರೆ. ಇಂಥ ಪ್ರಮುಖ ಪತ್ರಿಕಾ ಮಾಲೀಕನೊಬ್ಬ ಪತ್ರಿಕಾಕಾರರಿಲ್ಲದೆಯೂ ತಾನು ಪತ್ರಿಕೆ ನಡೆಸಬಲ್ಲೆ ಎಂದು ಕೊಚ್ಚಿಕೊಂಡಿದ್ದು ಎಲ್ಲರೂ ಬಲ್ಲರು. ತನ್ನ ಮಾತನ್ನು ಮನದಟ್ಟು ಮಾಡಿಸಲೆಂಬಂತೆ ಆತ ತನ್ನ ಪ್ರಕಾಶನಗಳ ಸಂಪಾದಕರಿಗೆ ಉತ್ಪಾದನಾ ಸಹಾಯಕ ನಿರ್ವಾಹಕರೆಂದು ಹೆಚ್ಚುವರಿಯಾಗಿ ಪದಮಾನ ಕೊಟ್ಟು, ಅದೇ ಕಂಪನಿಯ ಉತ್ಪಾದನಾ ನಿರ್ವಾಹಕರಿಗೆ ಹೀಗೆಯೇ ಹೆಚ್ಚುವರಿಯಾಗಿ ಸಹಾಯಕ ಸಂಪಾದಕರೆಂದು ಪದಮಾನ ಕೊಟ್ಟಿದ್ದು ಕೇಳಿಬಂದಿದೆ. ನನಗೆ ತಿಳಿದು ಬಂದಂತೆ ಸುದೈವಕ್ಕೆ ಅದೊಂದು ತಾತ್ಕಾಲಿಕ ಕ್ರಮವಾಗಿತ್ತು, ಆದರೆ ಆ ಕ್ರಮದ ಹಿಂದಿರುವ ಮನೋಭಾವ ಇನ್ನೂ ಉಳಿದುಕೊಂಡೇ ಇದೆ.

***ಈಗ ನೋಡಿದರೆ ಆದಾಯಗಳಿಸುವುದಕ್ಕೂ ಸಂಪಾದಕೀಯ ನೀತಿ ಮತ್ತು ಆಚರಣೆಗೂ ತಳುಕು ಹಾಕುತ್ತಿರುವುದು ಪತ್ರಿಕಾ ಪ್ರಾಮಾಣಿಕತೆಯ ದೃಷ್ಟಿಯಿಂದ ಸ್ವಲ್ಪ ಗಂಭೀರ ಸ್ವರೂಪದ್ದೇ ಆಗಿದೆಯೆನ್ನಬೇಕು.***



ಸಂಪಾದಕರ ಸ್ವಾಯತ್ತತೆ ಮತ್ತು ಅಧಿಕಾರಗಳು ಕುಗ್ಗುತ್ತಾ ಬಂದಿರುವುದು ಮತ್ತು, ಹಾಗೇ ನೋಡಿದಾಗ, ಬೇರೆ ಬೇರೆ ಮಟ್ಟಗಳಲ್ಲಿರುವ ಪತ್ರಿಕಾ ನಿರ್ವಹಣಾ ಸಿಬ್ಬಂದಿಯ ವಿಚಾರಕ್ಕೂ ಹೀಗೇ ಆಗುತ್ತಿರುವುದು ಕಳವಳಕಾರಿ ಬೆಳವಣಿಗೆ - ಹೀಗೇ ಹೇಳುತ್ತಿರುವುದಕ್ಕೆ ಕಾರಣ ಪತ್ರಿಕಾಕರ್ತನ ಕೈಯ್ಯಲ್ಲಿರುವ ಅಧಿಕಾರ ಶುದ್ಧಾಂಗವಾಗಿ ಸತ್ತ್ವಸಂಪನ್ನವಾದುದು, ಅದಕ್ಕೆ ಧಕ್ಕೆಯಾಗಬಾರದು ಎಂದಲ್ಲ, ಆದರೆ ಇಂಥ ಪ್ರವೃತ್ತಿ ಸ್ವಾತಂತ್ರ್ಯ ರಾಹುಗ್ರಸ್ತವಾಗುತ್ತದೆ ಎಂಬ ಕಾರಣಕ್ಕೆ. ಇಂಥ ಪ್ರವೃತ್ತಿಯಿಂದ ಒಟ್ಟಾರೆಯಾಗಿ ಸಂಪಾದಕರೆಲ್ಲರ ಘನತೆಗೆ ಪೆಟ್ಟು ತಗುಲಿದೆ, ತತ್ಫಲವಾಗಿ ಈ ವೃತ್ತಿಯೂ ನಲುಗುತ್ತಿದೆ ಎನ್ನಬೇಕು.

ಓದುಗರನ್ನು ಒಲಿಸಿಕೊಳ್ಳುವ ಮತ್ತು ಅವರ ಬಲದ ಮೇಲೆ ಜಾಹಿರಾತು ಗಿಟ್ಟಿಸುವ ಸ್ಪರ್ಧೆಯಲ್ಲಿ ಪತ್ರಿಕೆಗಳ ನಡುವೆ ತೀವ್ರ ಪೈಪೋಟಿಯಿಂದಾಗಿ ವೃತ್ತಪತ್ರಿಕಾ ವ್ಯವಹಾರದ ನೈತಿಕ ಆಚಾರದಲ್ಲಿ ಅತಿಯಾದ ಬದಲಾವಣೆಗಳಾಗಿವೆ. ಒಂದು ಕಾಲಕ್ಕೆ ಪತ್ರಿಕಾ ಪ್ರತಿಸ್ಪರ್ಧಿಗಳಲ್ಲಿ ತಾನೂ ಬದುಕಿ ಬೇರೆಯವರನ್ನೂ ಬದುಕಗೊಡುವ ಮನೋವೃತ್ತಿ ಇತ್ತು, ಪ್ರತಿಯೊಂದು ಪತ್ರಿಕೆಯೂ ತನಗೇ ನಿಷ್ಠವಾದ ವಾಚಕವೃಂದವಿದೆ ಎಂದು ಆತ್ಮವಿಶ್ವಾಸ ಹೊಂದಿತ್ತು. ಕಳೆದ ಕೆಲವು ವರ್ಷಗಳಿಂದೀಚೆಗೆ ಪರಿಸ್ಥಿತಿ ವಿಷಮಿಸಿದೆ, ಸ್ಪರ್ಧೆಯೇ ಒಂದು ಅಣಕವಾಗುವಂತೆ, ಸ್ಪರ್ಧಿಗಳನ್ನು ನಾಶಮಾಡಲೆಂಬಂತೆ ಪತ್ರಿಕೆಯ ಮಾರಾಟದ ಬೆಲೆಗಳನ್ನಿಳಿಸುವ ಸಮರ ನಡೆಯುತ್ತಿದೆ. ಇಂಥ ವ್ಯವಹಾರ ನಡೆಸುವುದರಿಂದ ನಮ್ಮ ಬಹು ಸಾಂಸ್ಕೃತಿಕತೆಗೆ, ಪ್ರಜಾತಂತ್ರಕ್ಕೆ ಏನು ವಿಪರೀತ ಪರಿಣಾಮವಾದೀತೆಂಬ ಎಚ್ಚರಿಕೆ ಹೊಂದಿರಬೇಕಾದುದು ನಮಗೆಲ್ಲರಿಗೂ ತುಂಬ ಮುಖ್ಯ.

ಇನ್ನು, ಪತ್ರಿಕೆಗಳು ವಾಣಿಜ್ಯ ದೃಷ್ಟಿಯಿಂದ ಬದುಕುಳಿದು ಲಾಭಗಳಿಸಬೇಕು ಎಂದು ಈಗ ಅತಿಯಾಗಿ ಒತ್ತು ಕೊಡುತ್ತಿರುವುದರಿಂದ ಅವುಗಳ ಗುಣಮಟ್ಟದ ಮೇಲೆ ಮತ್ತು ಸ್ವತಃ ಪತ್ರಿಕೋದ್ಯಮದ ಮೇಲೆ ನೇರವಾಗಿ ಎದ್ದು ಕಾಣುವಂತೆ ಪ್ರಭಾವ ಬೀಳುತ್ತಿದೆಯೆ ಎಂಬ ಪ್ರಶ್ನೆಗೆ ಬರೋಣ. ಈ ಪ್ರಶ್ನೆಗೆ ಒಂದೇ ಮಾತಿನಲ್ಲಿ ಸರಳವಾಗಿ ಉತ್ತರಿಸುವುದು ನಿಜವಾಗಿಯೂ ಕಷ್ಟ.

ಮೊದಲಿಗೆ, ಇತ್ತೀಚಿನ ಬೆಳವಣಿಗೆಗಳಿಂದ ಉಂಟಾಗಿರುವ ಸಕಾರಾತ್ಮಕ ಪರಿಣಾಮಗಳನ್ನು ಪರಿಶೀಲಿಸೋಣ:

- ಅನೇಕ ವೃತ್ತಪತ್ರಿಕಾ ಸಂಸ್ಥೆಗಳು ತಾಂತ್ರಿಕ ಸೌಕರ್ಯಗಳಿಗೆ ಹಣ ಖರ್ಚು ಮಾಡಲು ಉತ್ಸಾಹದಿಂದ ಮುಂದಾಗುತ್ತಿದ್ದಾರೆ, ಅದರ ಫಲವಾಗಿ ಪತ್ರಿಕೆಗಳ ಉತ್ಪಾದನಾ ಗುಣಮಟ್ಟ ಉತ್ತಮಗೊಂಡಿದೆ ಮತ್ತು ಸುದ್ದಿ ಸಂಗ್ರಹಣೆಗೆ ಅನುಕೂಲಗಳು ಒದಗಿವೆ.

- ವಾಸ್ತವಿಕ ಸುದ್ದಿ ಸಂಗ್ರಹಣಾ ಚಟುವಟಿಕೆಗಳಿಗಾಗಿ ಕೈ ಬಿಚ್ಚಿ ಖರ್ಚು ಮಾಡಲು ಹಿಂದೆಗೆಯುತ್ತಿಲ್ಲವಾಗಿ ನೇರ ವರದಿಗಳನ್ನು ಪಡೆಯುವುದು ಹೆಚ್ಚುತ್ತಿದ್ದು ಕೆಲವು ಸಂದರ್ಭಗಳಲ್ಲಾದರೂ ಪರೋಕ್ಷ ಮೂಲಗಳ ಮೇಲಿನ ಅವಲಂಬನೆ ತಗ್ಗುತ್ತಿದೆ (ಹೀಗಿದ್ದರೂ, ಲಾಭ ಗಳಿಸುತ್ತಿರುವ ಅನೇಕ ಪತ್ರಿಕೆಗಳು ತಮ್ಮ ವರದಿಗಾರರ ಪ್ರಯಾಣ ಪುಕ್ಕಟೆ ನಡೆಯುವಂತಿದ್ದರೆ ಅದನ್ನೆ ಮುಂದುವರಿಸುತ್ತಿರುವುದನ್ನು ಈ ಸಂದರ್ಭದಲ್ಲಿ ಹೇಳುವುದು ಅನುಚಿತವೇನಲ್ಲ).

ಪ್ರತಿಯೊಂದು ಪತ್ರಿಕೆಯೂ ಒಂದು ಉತ್ಪನ್ನವೆನಿಸಿ ತನ್ನದೇ ಆದ 'ವಿಶಿಷ್ಟ ವಿಕ್ರಯ ಗುಣ' () ವನ್ನು ರೂಢಿಸಿಕೊಳ್ಳುವ ನವೋತ್ಸಾಹ ತೋರುತ್ತಿದೆ, ಪರಿಣಾಮವಾಗಿ ಸುದ್ದಿ ಸಂಗ್ರಹಣೆ ಕ್ರಿಯೆಯಲ್ಲಿ ಸ್ವಲ್ಪ ಹೆಚ್ಚಿನ ಚೈತನ್ಯಶೀಲತೆ ಮೂಡುತ್ತಿದೆ.

ಪತ್ರಿಕೆಗಳ ರಚನೆ ಮತ್ತು ವಿನ್ಯಾಸಗಳ ವಿಚಾರಕ್ಕೆ ಹೊಸ ಆಲೋಚನೆಗಳು ಮೂಡಿದ್ದು ಪರಿಣಾಮತಃ ಒಟ್ಟಾರೆಯಾಗಿ ಅಂದ ಚೆಂದದಿಂದ ಕಣ್ಸೆಳೆಯುತ್ತವೆ.

- ಪ್ರಕಾಶನಗಳ ತ್ವರಿತ ವೃದ್ಧಿಯಿಂದಾಗಿ ಪತ್ರಿಕಾ ರಂಗದಲ್ಲಿ ಉದ್ಯೋಗವಕಾಶಗಳು ಬೆಳೆಯುತ್ತಿವೆ, ಜೊತೆಗೇ ವೇತನಗಳಲ್ಲಿ ಹೆಚ್ಚಳವಾಗಿದೆ, ಹಾಗಾಗಿ ಮೇಧಾವಿ ಯುವಜನ ಪತ್ರಿಕೋದ್ಯಮಕ್ಕೆ ಆಕರ್ಷಿತರಾಗುತ್ತಿದ್ದಾರೆ.

- ತರಬೇತಿಗೆ ಬೇಡಿಕೆ ಹೆಚ್ಚುತ್ತಿರುವುದು ಸುದೈವ, ಪತ್ರಿಕೋದ್ಯಮ ಶಿಕ್ಷಣ ಇನ್ನಷ್ಟು ವ್ಯಾಪಕಗೊಳ್ಳುತ್ತಿರುವುದಲ್ಲದೆ ಒಟ್ಟಾರೆಯಾಗಿ ಹಿಂದೆ ಇದ್ದುದಕ್ಕಿಂತ ಹೆಚ್ಚು ವೃತ್ತ್ಯಾತ್ಮಕವಾಗುತ್ತಿದೆ.

ಇದೇನೇ ಇದ್ದರೂ ಈ ಬೆಳ್ಳಿ ಮೋಡಗಳಿಗೂ ಕತ್ತಲ ಅಂಚು ಕಟ್ಟಿರುವುದನ್ನು ತಳ್ಳಿಹಾಕುವಂತಿಲ್ಲ:

- ಪತ್ರಿಕೆಯ ಆಂತರಿಕ ಮೌಲ್ಯಕ್ಕಿಂತ ಅದು ಮಾರಾಟವಾಗಬೇಕಾದುದೇ ಮುಖ್ಯವಾಗುತ್ತಿರುವುದರಿಂದ ಅದನ್ನು ಸರಿಸಿ ಅದರಲ್ಲಿ ಯಾವ ಯಾವ ಸುದ್ದಿ ಪ್ರಕಟವಾಗಬೇಕೆಂದು ತೀರ್ಮಾನವಾಗುತ್ತದೆ (ಡಚಸ್ ಆಫ್ ಯಾರ್ಕ್ ಬೆಂಗಳೂರಿಗೆ ಖಾಸಗಿ ಭೇಟಿ ನೀಡಿದಾಗ ತಮ್ಮ ತಮ್ಮ ಮುಖಪುಟದಲ್ಲಿ 'ಬೇರೆಲ್ಲೂ ಪ್ರಕಟವಾಗಿರಬಾರದು' ಅಂಥ ಸುದ್ದಿ ಪ್ರಕಟಣೆಗೆ ಹಾತೊರೆದು ಪತ್ರಿಕೆಗಳು ತೋರಿದ ಉದ್ವೇಗ ನೆನಪಿದೆಯೆ?)

ಪ್ರಜಾತಂತ್ರಾತ್ಮಕ ಸಮಾಜದಲ್ಲಿ ಪತ್ರಿಕೋದ್ಯಮದ ಪಾತ್ರದ ದೃಷ್ಟಿಯಿಂದ ಒಂದು ವೃತ್ತಿಯಾಗಿ ಅದಕ್ಕಿರುವ ಗುಣವಿಶೇಷಗಳು ಹೊಸದಾಗಿ ಕೆಲಸಕ್ಕೆ ಸೇರುವ ಹೊಸಬರನೇಕರಿಗೆ ಅಷ್ಟೇನೂ

ಪ್ರೇರಣೆ ನೀಡುವ ಶಕ್ತಿಯಾಗಿ ಕಾಣುತ್ತಿಲ್ಲ. (ಇಂದು ಬೆಳೆಯುತ್ತಿರುವುದು ವ್ಯಾವಹಾರಿಕ ಪತ್ರಿಕೋದ್ಯಮವೇ ಹೊರತು ಬೇರೆಯಲ್ಲ ಎಂಬುದು ಸ್ಪಷ್ಟ, ಈ ಮಾತಿಗೆ ಅದಕ್ಕಾಗಿ ಹೆಚ್ಚು ಪುಟಗಳನ್ನು ಮೀಸಲಿಡುವುದು, ಪ್ರಾಮುಖ್ಯತೆ ನೀಡುವುದು ಮತ್ತು ಹೆಚ್ಚು ಹೆಚ್ಚು ವಿದ್ಯಾರ್ಥಿಗಳು ಅದರಲ್ಲಿ ವಿಶೇಷ ನೈಪುಣ್ಯತೆಗಳಿಸಲು ಅಪೇಕ್ಷಿಸುವುದು ಇವೇ ಸಾಕ್ಷಿ)

• ಈ ಹೊಸ 'ವೃತ್ತಾತ್ಮಕ' ಆಲೋಚನಾ ರೀತಿಯೇ ಇವತ್ತಿನ ಪತ್ರಿಕೋದ್ಯಮ ಶಿಕ್ಷಣದ ಸ್ವಭಾವವಾಗಿ ಹಾಗೂ ಅಳತೆಗೋಲಾಗಿರುವುದೇ ಅಲ್ಲದೆ ಪತ್ರಿಕೋದ್ಯಮದ ಆಚಾರ ವ್ಯವಹಾರಗಳಲ್ಲೂ ಪ್ರತಿಫಲಿಸುತ್ತಿರುವುದು ಕಂಡು ಬರುತ್ತದೆ (ಈಗ ಬೇಕಾಗಿರುವುದು ಮೊದಲು ತಾಂತ್ರಿಕ ಕಾರ್ಯದಕ್ಷತೆ ಆಮೇಲೆ ಸಮಾಜದ ಮೇಲೆ ಪತ್ರಿಕೆಗಳು ಪ್ರಭಾವ ಬೀರುವ ಪಾತ್ರ ಮತ್ತು ಆ ಉದ್ದೇಶದ ಈಡೇರಿಕೆಗಾಗಿ ಪತ್ರಿಕಾಕರ್ತರು ಗಳಿಸಬೇಕಾದ ತಿಳಿವಳಿಕೆ ಮತ್ತು ವಿವೇಚನೆಯ ಮಾತು ಎಂಬ ವಿಚಾರ ಮೇಲುಗೈಯ್ಯಾಗುತ್ತಿದೆ).

ಇದರ ಜೊತೆಗೆ ಬಹುಶಃ ಟೆಲಿವಿಷನ್‌ನ ಆಕ್ರಮಣವೂ ಕಾರಣವಾಗಿ, ಒಂದು ಕಾಲಕ್ಕೆ ಸುದ್ದಿಯ ಮತ್ತು ಅಭಿಪ್ರಾಯಗಳ ಪ್ರಸಾರಕ್ಕೆ ಪ್ರಮುಖ ಸಾಧನವಾಗಿದ್ದ ಪತ್ರಿಕೆಗಳ ಮೇಲೆ ಈಗ ಹೆಚ್ಚು ಹೆಚ್ಚಾಗಿ ಮನರಂಜನೆ ಒದಗಿಸಬೇಕಾದ ಒತ್ತಡವೂ ಬೀಳುತ್ತಿರುವಂತೆ ಕಾಣುತ್ತದೆ. ದುರದೃಷ್ಟವೆಂದರೆ, ಇಂಥ ಬೆಳವಣಿಗೆ ಸಧಬಿರುಚಿಯ ಹಾಸ್ಯವನ್ನಾಗಲಿ ಅಥವಾ ಬೇರೆ ಬೇರೆ ರಚನಾತ್ಮಕ ರೀತಿಯಲ್ಲಿ ಮನರಂಜನೆಯನ್ನಾಗಲಿ ಒದಗಿಸಲು ಅಸಮರ್ಥವಾಗಿರುವುದು.

ಇದನ್ನು ತಿದ್ದಿಕೊಳ್ಳದ ಪತ್ರಿಕೆಗಳು ಸುಲಭದ ಮಾರ್ಗ ಹಿಡಿದು, ಮನರಂಜನೆಯ ಹೆಸರಿನಲ್ಲಿ ಲಕ್ಷ್ಮೀ ಸಂಪನ್ನರು ಮತ್ತು ಹೆಸರಾದವರು, ದಿಟ್ಟ ದಿಟ್ಟೆಯರು ಮತ್ತು ಮೊಗದರದದವರು ಬದುಕುವ ಬೆಡಗನ್ನು ಕುರಿತ ತುಣುಕುಗಳನ್ನು ತುರುಕುತ್ತಿವೆ. ಇವತ್ತು ಕೆಲವು ವೃತ್ತಪತ್ರಿಕೆಗಳ ಹಿಂಬದಿಯ ಪುಟಗಳು ಗಾಳಿಸುದ್ದಿಗಳಿಗೆಂದೇ ಮೀಸಲಾಗಿರುತ್ತವೆ - ಸಮಾಜದ ಮೇಲ್ವರ್ಗದ ಜನರಿಂದ ಮತ್ತು ಫ್ಯಾಷನ್ ಪ್ರಪಂಚದಿಂದ ಸಾಕಷ್ಟು ತುಣುಕು ಸುದ್ದಿ ಒದಗದಿದ್ದರೆ ಬಾಲಿವುಡ್ ಅನ್ನು, ವಿಶ್ವ ಮನರಂಜನೋದ್ಯಮ ಮತ್ತು ಬೆಡಗಿನ ಲೋಕವನ್ನು ಎಳೆದು ತರುತ್ತಾರೆ. ಈ ಸಂದರ್ಭದಲ್ಲಿ, ಇದೆಲ್ಲ ಸದಾಕಾಲ ನಿಷ್ಕಲ್ಮಶ ವಿನೋದಕ್ಕಾಗಿಯೇ ಎಂದು ಹೇಳಲಾರೆ. ಸಂಪಾದಕೀಯ ಹಿತವೂ ವಾಣಿಜ್ಯ ಹಿತವೂ (ಇದನ್ನು ಈ ಹಿಂದೆ ಪ್ರಸ್ತಾಪಿಸಿದ್ದೇನೆ) ಅನ್ಯೋನ್ಯವಾಗಿ ಹೆಣೆದುಕೊಂಡಿದ್ದು, ಕೆಲವು ಸಲ ಈ ಅನ್ಯೋನ್ಯತೆ ವ್ಯಾಪಾರ ವ್ಯವಹಾರದ ಪುಟಗಳಲ್ಲಿರುವುದಕ್ಕಿಂತಲೂ ಹೆಚ್ಚು ಗಾಢವಾಗಿ ಎದ್ದು ಕಾಣುತ್ತವೆ.

ಇದರ ಜೊತೆಗೆ, ಈ ಟೆಲಿವಿಷನ್ ಯುಗದಲ್ಲಿ ಸಾಮಾನ್ಯ ಓದುಗರು ಗಮನ ಹರಿಸುವ ಶಬ್ದಗಳ ವ್ಯಾಪ್ತಿ 500-800 ಪದಗಳನ್ನು ಮೀರುವುದಿಲ್ಲವೆಂದು ಊಹಿಸಲಾಗಿದೆ. ಹೀಗಾಗಿ, ಏನೇ ಘಟನೆಗಳಿರಲಿ, ಏನೇ ಪ್ರಶ್ನೆಗಳಿರಲಿ ಅವೆಲ್ಲವನ್ನು ಕಿರಿದಾಗಿಸಿ ಅರ್ಥವಾಗುವ ಕೆಲವೇ ತುಣುಕುಗಳಲ್ಲಿ ಮುಗಿಸಿಬಿಡುತ್ತಾರೆ. ಇಂಥ ಸಂಕ್ಷಿಪ್ತತೆಯಿಂದ ಜಳ್ಳುತನ, ತೋರುಕೆಗಳಿಗೆ ದಾರಿಯಾಗುವುದಿಲ್ಲವೆಂದಾದರೆ ಒಳ್ಳೆಯದೆ ಅನ್ನಿ. ಆದರೆ, ದುರದೃಷ್ಟವಶಾತ್ ಇವತ್ತು ಕಾಣುತ್ತಿರುವುದು ಬರಿಯ ಚಮಕು, ಗಾಢತೆಯ ಅಭಾವ ಮತ್ತು ತೋರಿಕೆ.

ಆರ್ಥಿಕ 'ಉದಾರೀಕರಣ' ಮತ್ತು 'ಜಾಗತೀಕರಣ' ಗಳ ಈ ಸಾಹಾಸಿಕ ನವೀನ ಪ್ರಪಂಚದಲ್ಲಿ ಭಾರತದಂಥ ಅಭಿವೃದ್ಧಿಶೀಲ, ಪ್ರಜಾತಂತ್ರಾತ್ಮಕ ದೇಶದ ಮಾಧ್ಯಮಗಳ ಪಾತ್ರ ಮತ್ತು ಜವಾಬ್ದಾರಿಗಳನ್ನು ಕುರಿತಂತೆ ಇದ್ದ ಆ ಹಿಂದಿನ 'ಔದಾರ್ಯಪೂರ್ಣ ಒಮ್ಮತ' ದ ಲವಾಂಶವೂ ಈಗ ಉಳಿದಿರುವಂತೆ ಕಾಣುತ್ತಿಲ್ಲ.

ಮಾರುಕಟ್ಟೆ ಮತ್ತು ತಳದವರೆಗೂ ಜಿನುಗುವ ಸಿದ್ಧಾಂತ ಎಲ್ಲ ಅನರ್ಥಗಳಿಗೂ ರಾಮಬಾಣ ಎಂದು ಅಂಗೀಕರಿಸಿರುವ ಈಗ ಅತ್ಯಂತ ಮೂಲಭೂತ ಜೀವನಾವಶ್ಯಕ ವಸ್ತುಗಳಿಂದ ವಂಚಿತರಾಗಿರುವವರ ಮತ್ತು ಆ ಕಾರಣದಿಂದಾಗಿಯೇ ಮಾರುಕಟ್ಟೆ ಇಷ್ಟೊಂದು ಬಡಾಯಿ ಕೊಚ್ಚುತ್ತಿದ್ದರೂ ಅದರಲ್ಲಿ ಏನೇನೂ ಸಂಬಂಧವಿಲ್ಲದವರ ಕುರಿತು, ಅಂಥವರಾರು ದೇಶದ ಜನಸಂಖ್ಯೆಯ ಬಹು ಸಂಖ್ಯಾತರೇ ಆಗಿದ್ದರೂ, ಚಿಂತಿಸುತ್ತಾ ಕೂರುವ ಅಗತ್ಯವಾದರೂ ಏಕೆ, ಅಲ್ಲವೆ? ಇಂಥ ಬಹು ಸಂಖ್ಯಾತರು ಇದ್ದಾರೆನ್ನುವುದೇ ಅನೇಕ ಸಲ ಅವರ ವಿರುದ್ಧ ಏಳುವ ದೂರು : ಅವರ ಜನಸಂಖ್ಯೆ ವಿಪರೀತ ಏರುತ್ತಿದೆ ; ಜನಸಂಖ್ಯಾ ನಿಯಂತ್ರಣ ಒಂದೇ ನಿಶ್ಚಯವಾಗಿ ಅವರ ಸಮಸ್ಯೆಗಳಿಗೆ ಹಾಗೂ ದೇಶಕ್ಕೆ ಅವರಿಂದ ಉದ್ಭವಿಸುವ ಸಮಸ್ಯೆಗಳಿಗೆ ಉತ್ತರ, ಹೀಗೆ.

ಒಂದೆರಡು ವರ್ಷಗಳ ಹಿಂದೆ ಪ್ರಮುಖ ರಾಷ್ಟ್ರೀಯ ವೃತ್ತ ಪತ್ರಿಕೆಯ ನಿರ್ವಾಹಕ ವರ್ಗದ ಸದಸ್ಯರು ಮುಂಬೈನಲ್ಲಿ ಕಮ್ಯೂನಿಕೇಷನ್ (Communications) ವಿದ್ಯಾರ್ಥಿಗಳನ್ನು ಉದ್ದೇಶಿಸಿ ಮಾತನಾಡುತ್ತಾ ತಮ್ಮ ಸಂಸ್ಥೆಯಲ್ಲಿ 'ಮೃದು ಮನಸ್ಸಿನ' ಮಂದಿಗೆ ಜಾಗವಿಲ್ಲ ಎಂದು ಸ್ಪಷ್ಟವಾಗಿಯೇ ಆಡಿ ತೋರಿಸಿದರು.

***'ಆಕೆಯದು ವಿಪರೀತ ಬದ್ಧತೆ' ಅತಿಯಾದ ಹೋರಾಟಗಾರ್ತಿ' ಎಂದಿದ್ದರು ಆ ಸಂಪಾದಕರು. ಇವತ್ತಿನ ಮಾಧ್ಯಮ ಪ್ರಪಂಚದಲ್ಲಿ ಹೀಗೆ ಮಾತಾಡಿದರೆ ಖಂಡಿತವಾಗಿ ಅದೊಂದು ಅರ್ಹತೆಯೇ ಸರಿ.***

***ಇದರ ಜೊತೆಗೆ, ಈ ಟೆಲಿವಿಷನ್ ಯುಗದಲ್ಲಿ ಸಾಮಾನ್ಯ ಓದುಗರು ಗಮನ ಹರಿಸುವ ಶಬ್ದಗಳ ವ್ಯಾಪ್ತಿ 500-800 ಪದಗಳನ್ನು ಮೀರುವುದಿಲ್ಲವೆಂದು ಊಹಿಸಲಾಗಿದೆ. ಹೀಗಾಗಿ, ಏನೇ ಘಟನೆಗಳಿರಲಿ, ಏನೇ ಪ್ರಶ್ನೆಗಳಿರಲಿ ಅವೆಲ್ಲವನ್ನು ಕಿರಿದಾಗಿಸಿ ಅರ್ಥವಾಗುವ ಕೆಲವೇ ತುಣುಕು ಗಟ್ಟಗಳಲ್ಲಿ ಮುಗಿಸಿಬಿಡುತ್ತಾರೆ.***

ಹೆಸರಾಂತ ಸಂಪಾದಕರೊಬ್ಬರು ಪತ್ರಿಕಾಕರ್ತರೊಬ್ಬರನ್ನು ಕುರಿತು ಹೀನಾಯವಾಗಿ, ತಾನು ಯಾವುದನ್ನು 'ಭರಾಟೆ ಕುಂದಿಸುವ ವಿಷಯಗಳು' (depressing subjects) ಎನ್ನುತ್ತೇನೋ ಅದನ್ನೆ ಕುರಿತು ಬರೆಯಲು ಆಕೆ ಮೊಂಡು ಹಿಡಿಯುತ್ತಾಳೆ ಎಂದು ಟೀಕಿಸಿದ್ದನ್ನು ಕೇಳಿದ್ದೇನೆ. 'ಆಕೆಯದು ವಿಪರೀತ ಬದ್ಧತೆ' ಅತಿಯಾದ ಹೋರಾಟಗಾರ್ತಿ' ಎಂದಿದ್ದರು ಆ ಸಂಪಾದಕರು. ಇವತ್ತಿನ ಮಾಧ್ಯಮ ಪ್ರಪಂಚದಲ್ಲಿ ಹೀಗೆ ಮಾತಾಡಿದರ ಖಂಡಿತವಾಗಿ ಅದೊಂದು ಅರ್ಹತೆಯೇ ಸರಿ.

*ಕರುಣಾರಸವುಕ್ಕಿಸುವ ಬಾಲ ಕಾರ್ಮಿಕತೆ ಬರಹಕ್ಕೆ ಯುಕ್ತ ವಿಷಯವೇನೋ ಹೌದು, ಆದರೆ ಮಾನವಾಸಕ್ತಿ ಮತ್ತು ಶೀಘ್ರ ಪರಿಹಾರಗಳನ್ನು ಮೀರಿ ಮುಂದೆ ಸಾಗಿದರೆ ಓದುಗರಿಗೆ ಬೇಸರ ಹುಟ್ಟೀತು : ವಯಸ್ಕ ಕೆಲಸಗಾರರಿಗೆ ಖಾತರಿಯಾದ ಸತತ ಉದ್ಯೋಗ, ನ್ಯಾಯವಾದ ಕನಿಷ್ಠ ಮಜೂರಿ, ಮೂಲಭೂತ ಅಗತ್ಯಗಳು ಇತ್ಯಾದಿಯಾಗಿ ಇಂಥವೆಲ್ಲ ಯಾರಿಗೆ ತಾನೆ ಬೇಕಾಗಿದೆ?*

ನಮ್ಮ ಪ್ರಜಾಕೋಟಿಗಳಲ್ಲಿ ಸೌಲಭ್ಯ ವಂಚಿತ ವರ್ಗದವರ ಸಮಸ್ಯೆಗಳನ್ನು ವರದಿ ಮಾಡುವುದು ನಿಸ್ಸಂಶಯವಾಗಿ ಶೀಘ್ರ ಗತಿಯಲ್ಲಿ ಕುಗ್ಗುತ್ತಿದ ರಾಜಕೀಯ ಗಾಳಿ ಸುದ್ದಿಗಳು (ಯಾರನ್ನು ಯಾರು ಉರುಳಿಸುತ್ತಾರೆ, ಯಾರೊಂದಿಗೆ ಯಾರು ಸೇರಿಕೊಳ್ಳುತ್ತಾರೆ ಇತ್ಯಾದಿ) ಭ್ರಷ್ಟಾಚಾರಗಳು ಮತ್ತು ಹಗರಣಗಳು (ಬೆಟ್ಟಗಳಷ್ಟು ಹಣವನ್ನು ದೋಚಿ ಕಬಳಿಸುವುದರಿಂದ ದೇಶದ ಮತ್ತು ಅದರ ನಾಗರಿಕರ ಮೇಲೆ ಆಗುವ ಪರಿಣಾಮದ ವಿಶ್ಲೇಷಣೆ ಕೇಳಬೇಡಿ), ಮತ್ತು ಸಂಪನ್ನರ ಜೀವನ ಶೈಲಿಗಳು ಇವೆಲ್ಲ ಇರುವಾಗ ಜನತೆಯ ಮೂರನೆ ಎರಡು ಭಾಗದಷ್ಟಿರುವವರ ಕಷ್ಟ-ಸುಖಗಳು, ಕಾಳಜಗಳನ್ನು ಕುರಿತು ಬರೆಯಲು ಎಲ್ಲಿ ಜಾಗವಿದೆ, ಯಾರಿಗೆ ತಾನೆ ಪುರಸೊತ್ತಿದೆ?

ಇಂಥ ಪ್ರಶ್ನೆಗಳು ಇವತ್ತಿನ ಪತ್ರಿಕೆಗಳಲ್ಲಿ ಬರುವುದೇ ಇಲ್ಲ ಎನ್ನಲಾರೆ. ಆದರೆ, ಎಲ್ಲೊ ಖಾನೆಗಳ ಮೇಲೆ ಕಟ್ಟಿಟ್ಟದ್ದ ಅಂಥವನ್ನು ಬಿಚ್ಚಿ ಧೂಳು ಝಾಡಿಸಿ ಯಾವುದೋ ಒಂದು ಪುಟದಲ್ಲಿ ಹಾಕಿದ್ದಾಯ್ತು ಎಂದಾಗಲೂ ಅವು ತೀರಾ ಸರಳವಾಗಿ, ಒಂದು ಇನ್ನೊಂದರ ನೆರಳಾಗಿ ಮತ್ತು ಮೇಲ್‌ತೋರ್ಕೆಯವಾಗಿ ಇದ್ದರೂ ಸಾರ್ವಜನಿಕರಿಗೆ ಇಂಥ ಸಮಸ್ಯೆಗಳ ತಿಳಿವಳಿಕೆ ಉಂಟು ಮಾಡುತ್ತೇವೇನೋ ಸರಿ, ಆದರೆ ರಾಷ್ಟ್ರ ಎದುರಿಸುತ್ತಿರುವ ಕೆಲವು ಇನ್ನೂ ಹೆಚ್ಚು ಗಂಭೀರ ಸ್ವರೂಪದ ಸಮಸ್ಯೆಗಳನ್ನು ಅರ್ಥ ಮಾಡಿಕೊಳ್ಳುವುದಕ್ಕೆ ಅವರಿಗೆ ಅವುಗಳಿಂದ ಏನೂ ಸಹಾಯವಾಗುವುದಿಲ್ಲ.

ಇವತ್ತು ಪತ್ರಿಕಾಕರ್ತರಿಗೆ ಹಿಂದೆಂದಿಗಿಂತಲೂ ಎಷ್ಟೋ ವ್ಯಾಪಕ ಶ್ರೇಣಿಯ ವಿಷಯಗಳ ಕುರಿತು ಮಾಹಿತಿಗಳನ್ನು ದೃಷ್ಟಿಕೋನಗಳನ್ನು ಗಳಿಸಿಕೊಳ್ಳಲು ಹೆಚ್ಚಿನ ಅವಕಾಶಗಳಿವೆ, ಆದರೂ ಜ್ಞಾನಾನ್ವೇಷಣೆಗೆ ಹೊರಡುವ, ಅರಿವನ್ನು ವಿಸ್ತರಿಸಿಕೊಳ್ಳುವ ಉತ್ಸಾಹ ಇಲ್ಲ, ಬಹುಶಃ ಇದಕ್ಕೆ ಕಾರಣ




ಸಂಪಾದಕ ಪ್ರಭು ವರ್ಗಕ್ಕೆ ಅದು ಬೇಕಿಲ್ಲದಿರುವುದು ಅಥವಾ ಅದು ಪ್ರೋತ್ಸಾಹಿಸದಿರುವುದು.

ಇದರ ಫಲವೆಂದರೆ, ನಮ್ಮ ಸಮಾದವನ್ನು ಬೇರೂರಿ ಕಾಡುತ್ತಿರುವ ಹಲವಾರು ಪೀಡೆಗಳ ರೋಗಲಕ್ಷಣಗಳು ಆಗ ಈಗ ಪತ್ರಿಕೆಗಳಲ್ಲಿ ವರದಿಯಾದರೂ, ಪತ್ರಿಕಾಕರ್ತರು ತಾವೇ ಈ ರೋಗಗಳನ್ನು ವಿಶ್ಲೇಷಿಸುವ ಪ್ರಯತ್ನ ಮಾಡುತ್ತಿಲ್ಲ. ಸಂಪಾದಕೀಯ ವರ್ಗದವರು ತಾವು ತಾವೇ ಕುಳಿತು ಬರೆಯುವ ಸಂಪಾದಕೀಯ ಲೇಖನಗಳನ್ನು ಬಿಟ್ಟರೆ, ಉಳಿದಂತೆ ಪತ್ರಿಕೆಯಲ್ಲಿ ಬರುವ ವ್ಯಾಖ್ಯಾನಗಳ ಮತ್ತು ವಿಶ್ಲೇಷಣೆಗಳ ಹೆಚ್ಚಿನಂಶ - ಪ್ರಧಾನವಾಗಿ ಸಂಪಾದಕೀಯ ಪುಟಗಳಲ್ಲಿ ಮತ್ತು ಕೆಲವು ಸಾರಿ ಮ್ಯಾಗ್‌ಜೈನ್ ವಿಭಾಗದಲ್ಲಿ ಪತ್ರಿಕಾ ವ್ಯವಸ್ಥೆಯ ಹೊರಗಿರುವವರಿಂದಲೇ ಬರೆಯಲ್ಪಡುತ್ತದೆ. ಕೆಲವು ವಿರಳ ಉದಾಹರಣೆಗಳನ್ನು ತೆಗೆದುಕೊಳ್ಳೋಣ.

ಈಚೆಗೆ ಪತ್ರಿಕೆಗಳು ನಮ್ಮ ನಗರಗಳಲ್ಲಿ ಅಪರಾಧ ಪ್ರಕರಣಗಳು, ರೌಡಿಗಳ ಹಾವಳಿ ಮತ್ತು ದರೋಡೆಖೋರತನಗಳು ಹೆಚ್ಚುತ್ತಿರುವುದನ್ನು ಮತ್ತು ಜನ ಜೀವನದ ವಿವಿಧ ಮುಖಗಳ ಮೇಲೆ ಭೂಗತ ದುಷ್ಟರ ದುಷ್ಪ್ರಭಾವ ಹೆಚ್ಚುತ್ತಿರುವುದನ್ನು ವರದಿ ಮಾಡುತ್ತಿವೆ. ಆದರೆ, ನಗರದ ಈ ವಿದ್ಯಮಾನಗಳ ಮೂಲವನ್ನು ತಿಳಿದುಕೊಳ್ಳಲು ಓದುಗರಿಗೆ ನೆರವಾಗುವಂತಹ ಗಂಭೀರ ಲೇಖನಗಳು ಇಂಥ ವರದಿಗಳೊಂದಿಗೆ ಪ್ರಕಟವಾಗುವುದಿಲ್ಲ.

ಅನೇಕ ಸಲ ಎಂಥ ಪ್ರಶ್ನೆಗಳನ್ನು ಕೇಳಬೇಕೋ ಅವುಗಳನ್ನು ಯಾರು ಎತ್ತುವುದಿಲ್ಲ. ಉದಾಹರಣೆಗೆ, ಇದೆಲ್ಲಕ್ಕೂ ನಿರುದ್ಯೋಗ ಮತ್ತು

ಆರೆ-ಉದ್ಯೋಗಗಳ ಪ್ರಮಾಣ ಅಧಿಕವಾಗುತ್ತಿರುವುದು ಕಾರಣವೆ? ನಗರಗಳ ಬಡವರನ್ನು ಅವರ ನೆಲೆಗಳಿಂದ ಹೊರದೂಡುತ್ತಿರುವುದು ಮತ್ತು ಭವಿಷ್ಯದಲ್ಲಿ ಬೆಳಕೆಂಬುದೇ ಮೂಡದ ಸೌಲಭ್ಯವಂಚಿತ ಯುವ ಜನರು ಪರಕೀಯರೆಂಬಂತೆ ದೂರವಾಗುತ್ತಿರುವುದು ಕಾರಣವೆ? ಅಥವಾ 'ಉದಾರಗೊಳ್ಳುತ್ತಿರುವ' ನಮ್ಮ ಈ ಕಾಲದ ಎದ್ದು ಕಾಣುವಂತಹ ಈ ಮುಂದಿನ ವೈಲಕ್ಷಣ್ಯಗಳಿಗೂ ಇದಕ್ಕೂ ಸಂಬಂಧವಿದೆಯೆ? : ಉಳ್ಳವರ ಮತ್ತು ಇಲ್ಲದವರ ನಡುವಿನ ಅಂತರ ಹಿಗ್ಗುತ್ತಿರುವುದೆ? ಮತ್ತು ಶ್ರೀಮಂತರು ಹಾಗೂ ಪ್ರಸಿದ್ಧರು ಯಾವ ಮುಚ್ಚುಮರೆಯೂ ಇಲ್ಲದೆ ಯಾರು ಬೇಕಾದರೂ ನೋಡಿದರೇನು ಎಂಬಂತೆ ಉಪಭೋಗದ ವಸ್ತುಗಳನ್ನು ಕಣ್ಣುಕುಕ್ಕುವಂತೆ ಬಳಸುತ್ತಿರುವುದನ್ನು ಮುದ್ರಣ ಮಾಧ್ಯಮ ಮತ್ತು ಎಲೆಕ್ಟ್ರಾನಿಕ್ ಮಾಧ್ಯಮಗಳೆರಡೂ ಥಾಳಾಗಿ ಪ್ರದರ್ಶಿಸುತ್ತಿರುವುದೆ?

ಇದೇ ರೀತಿ, ಬಾಲ ಕಾರ್ಮಿಕರ ವಿಚಾರಕ್ಕೆ ಪತ್ರಿಕೆಗಳಲ್ಲಿ ಮೊಸಳೆ ಕಣ್ಣೀರು ಸುರಿಸುವುದು ಪದ್ಧತಿಯಾಗಿ ಬಿಟ್ಟಿದೆ, ಅದರಲ್ಲೂ ಬಾಲ ಕಾರ್ಮಿಕರನ್ನು ಹಿಂಸಿಸಿದ ಹೀನ ಕೃತ್ಯಗಳು ನಡೆದಾಗ, ಅಪಘಾತದಿಂದ ಯಾರಾದರೂ ಬಾಲ ಕಾರ್ಮಿಕರ ಸಾವಿಗೆ ಕಾರಣವಾದಾಗ ಅಥವಾ ಜೀತದಲ್ಲಿರುವ ಬಾಲ ಕಾರ್ಮಿಕರನ್ನು 'ಮುಕ್ತಗೊಳಿಸುವ' ಪ್ರಯತ್ನವೆಂಬಂತಹ ನಾಟಕೀಯ ಆಂದೋಳನಗಳಾಗುವಾಗ ಈ ಮೊಸಳೆ ಕಣ್ಣೀರಿನದು ಇನ್ನೂ ವಿಶೇಷ. ಆದರೆ, ಈ ಸಮಸ್ಯೆಯನ್ನು ಎದುಸಿರಿ ಕಳೆದ ಹಲವು ದಶಕಗಳಿಂದ ಪ್ರಯತ್ನಗಳು ನಡೆಯುತ್ತಿದ್ದರೂ ಅದು ಜಗ್ಗದೆ ತಗ್ಗದೆ ಅಡರಿಕೊಂಡಿರುವುದಕ್ಕೆ ಕಾರಣವೇನೆಂದು ಕಂಡುಕೊಳ್ಳುವ ಆಸಕ್ತಿ ಅಷ್ಟಾಗಿ ಗೋಚರವಾಗುತ್ತಿಲ್ಲ ಸಮಸ್ಯೆಯ ಮೂಲದಲ್ಲಿ ಜಟಿಲ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಕಾರಣಗಳಿದ್ದು, ಅವುಗಳನ್ನು ಎದುರಿಸುವ ಧೀರ್ಘಕಾಲೀನ ತಂತ್ರಗಳನ್ನು ಅನುಸರಿಸುವ ಬದಲಿಗೆ ಸರಳ ರೀತಿಯಿಂದ ಕಾನೂನಿನ ಪರಿಹಾರ ಪಡೆಯುವುದಕ್ಕೆ ಒಲವು ತೋರಿಸಲಾಗುತ್ತಿದೆ. ಕರುಣಾರಸವುಕ್ಕಿಸುವ ಬಾಲ ಕಾರ್ಮಿಕತೆ ಬರಹಕ್ಕೆ ಯುಕ್ತ ವಿಷಯವೇನೋ ಹೌದು, ಆದರೆ ಮಾನವಾಸಕ್ತಿ ಮತ್ತು ಶ್ರೀಘ್ರ ಪರಿಹಾರಗಳನ್ನು ಮೀರಿ ಮುಂದೆ ಸಾಗಿದರೆ ಓದುಗರಿಗೆ ಬೇಸರ ಹುಟ್ಟೀತು : ವಯಸ್ಕ ಕೆಲಸಗಾರರಿಗೆ ಖಾತರಿಯಾದ ಸತತ ಉದ್ಯೋಗ, ನ್ಯಾಯವಾದ ಕನಿಷ್ಠ ಮಜೂರಿ, ಮೂಲಭೂತ ಅಗತ್ಯಗಳು ಇತ್ಯಾದಿಯಾಗಿ ಇಂಥವೆಲ್ಲ ಯಾರಿಗೆ ತಾನೆ ಬೇಕಾಗಿದೆ?

ದಿನಕ್ಕೊಂದು ಹಗರಣದ ಈ ಕಾಲದಲ್ಲಿ ಭ್ರಷ್ಟಾಚಾರ ಜ್ವಲಂತ ವಿಷಯವಾಗಿರುವಾಗ, ಕೋರ್ಟುಗಳು, ಕೇಂದ್ರ ತನಿಖಾ ಬ್ಯೂರೋ (CBI), ಜಾರಿ ನಿರ್ದೇಶನಾಲಯ ಮತ್ತು ಇನ್ನಿತರ ಸರ್ಕಾರಿ ಅಂಗಗಳು, ಇವರಲ್ಲದೆ ಆಪಾದಿತರ ಮಿತ್ರರು ಮತ್ತು ಶತ್ರುಗಳು ಏನು ಹೇಳುತ್ತಾರೆ ಅಥವಾ ಏನು ಮಾಡುತ್ತಾರೆ ಎಂದು ವರದಿ ಮಾಡುವುದರಲ್ಲಷ್ಟೆ ಪತ್ರಿಕೆಗಳು ತೃಪ್ತಿಪಡುವಂತೆ ಕಾಣುತ್ತದೆ. ಭ್ರಷ್ಟಾಚಾರಕ್ಕೂ ಬೇರೂರಿರುವ ಬಡತನಕ್ಕೂ ಸಂಬಂಧವಿದೆಯೆನ್ನುವ ವಿಷಯಕ್ಕೆ ಅವು ತಲೆ ಕೆಡಿಸಿಕೊಳ್ಳುವುದಿಲ್ಲ. ಬಜೆಟ್ ಹಂಚಿಕೆಯಲ್ಲಿ ರಕ್ಷಣಾ ವೆಚ್ಚಗಳ ನಂತರ ಎರಡನೆಯದಾಗಿ ಬರುವುದೇ ಬಡತನ ನಿವಾರಣಾ ಕಾರ್ಯಕ್ರಮಗಳು ಎಂದು ಹೇಳಲಾಗುತ್ತಿರುವಾಗ, ಇಷ್ಟೊಂದು ಜನ ಬಡತನ ರೇಖೆಯ ಕೆಳಗೆ ಜೀವಿಸುತ್ತಿರುವುದಕ್ಕೆ ಕಾರಣವಾದರೂ ಏನು ಎಂದು ವ್ಯವಸ್ಥಿತವಾಗಿ ಸತ್ಯವನ್ನು ಹೊರಗೆಳೆಯುವಷ್ಟು ದೂರಕ್ಕೆ ತನಿಖಾ ಪತ್ರಿಕೋದ್ಯಮ ಸಾಗುತ್ತಿಲ್ಲ.

ಮಹಿಳೆಯರ ಸಮಸ್ಯೆಗಳಿಗೆ ಪತ್ರಿಕೆಗಳು ಈಗ ಮಾನ್ಯತೆ ಕೊಡಲಾರಂಭಿಸಿವೆ. ಆದರೆ ಹೆಚ್ಚಿನ ಬರಹವೆಲ್ಲ ಹಿಂಸೆ, ಅತ್ಯಾಚಾರಗಳು ಅಥವಾ ತಥಾ ಕಥಿತ 'ನವೀನ ಮಹಿಳೆ'ಯ ಆತಂಕಗಳು, ಆಕಾಂಕ್ಷೆಗಳು ಇಂಥವನ್ನು ಕುರಿತು ಪ್ರದಕ್ಷಿಣೆ ಹಾಕುತ್ತವೆ. ಮಹಿಳೆಯರು ಎದುರಿಸುತ್ತಿರುವ ಸಮಸ್ಯೆಗಳ ನೈಜ ಸ್ವಭಾವ ಏನು, ಅವುಗಳ ಬೇರು ಎಷ್ಟು ಆಳದಲ್ಲಿದೆ, ಸಮಸ್ಯೆಗಳು ಎಷ್ಟು ಗಂಭೀರವಾಗಿವೆ ಎಂದು ತೆರೆದು ತೋರಿಸುವಂಥ ವಾಸ್ತವಿಕ ಸ್ಥಿತಿಗಳು ಹಿಂದಿನಿಂದಲೂ ಇದ್ದರೂ ನಾಟಕೀಯತೆಯಿಲ್ಲದ ಅವುಗಳಲ್ಲಿ ಯಾರಿಗೂ ಅಷ್ಟಾಗಿ ಆಸಕ್ತಿಯಿಲ್ಲ, ಮತ್ತು ಲಿಂಗಾಧಾರಿತ ತಾರತಮ್ಯತೆ ಹಾಗೂ ದಮನಗಳು ಹೇಗೆ ಸರ್ವವ್ಯಾಪಿ ಸ್ವಭಾವದವಾಗಿವೆ ಎಂದು ಓದುಗರು ಅರ್ಥ ಮಾಡಿಕೊಳ್ಳುವುದಕ್ಕೆ ನೆರವಾಗುವ ಪ್ರಯತ್ನ ನಡೆಯುತ್ತಿಲ್ಲ. ಇಂಥ ಸನ್ನಿವೇಶದಲ್ಲಿ ವರದಕ್ಷಿಣೆ ಕೊಲೆಗಳು, ಸ್ತ್ರೀಯರ ಆತ್ಮಹತ್ಯೆಗಳು, ಅತ್ಯಾಚಾರಗಳು, ಸ್ತ್ರೀಭ್ರೂಣ ಹತ್ಯೆ ಪ್ರಕರಣಗಳು ಇಂಥವೆಲ್ಲವೂ ವರದಿಗಳಲ್ಲಿ ತಪ್ಪದೇ ಬರುತ್ತಿವೆ.

*ಮಹಿಳೆಯರ ಸಮಸ್ಯೆಗಳಿಗೆ ಪತ್ರಿಕೆಗಳು ಈಗ ಮಾನ್ಯತೆ ಕೊಡಲಾರಂಭಿಸಿವೆ. ಆದರೆ ಹೆಚ್ಚಿನ ಬರಹವೆಲ್ಲ ಹಿಂಸೆ, ಅತ್ಯಾಚಾರಗಳು ಅಥವಾ ತಥಾ ಕಥಿತ 'ನವೀನ ಮಹಿಳೆ'ಯ ಆತಂಕಗಳು, ಆಕಾಂಕ್ಷೆಗಳು ಇಂಥವನ್ನು ಕುರಿತು ಪ್ರದಕ್ಷಿಣೆ ಹಾಕುತ್ತವೆ.*

ಒಂದು ದೊಡ್ಡ ಸಮಸ್ಯೆಯೆಂದರೆ ಒಂದೆಡೆ ಕಾರ್ಪೋರೇಟ್‌ಗಳನ್ನು ವರದಿ ಮಾಡಲು ಕಳುಹಿಸುವ ಪತ್ರಕಾಕರ್ತರ ದಂಡು ಬೆಳೆಯುತ್ತಿದ್ದರೆ ಇನ್ನೊಂದೆಡೆ ವ್ಯಾಪಾರ ವ್ಯವಹಾರ ಸುದ್ದಿಗಳಿಗೆಂದು ಹೆಚ್ಚು ಹೆಚ್ಚು ವಿಶೇಷ ಪುಟಗಳನ್ನು ಮೀಸಲಿಡುತ್ತಿರುವುದು. ಪತ್ರಿಕೆಗಳು ವ್ಯಾಪಾರ-ವ್ಯವಹಾರ ಪತ್ರಿಕೋದ್ಯಮಕ್ಕೆ ಸೀಮಿತವಾಗಿ ತಮ್ಮ ವಿಶೇಷಜ್ಞತೆ ಬೆಳೆಸಿಕೊಳ್ಳುತ್ತಿವೆ, ಅದೇ ಶಿಕ್ಷಣ, ಆರೋಗ್ಯ ರಕ್ಷಣೆ, ಕೃಷಿ, ಕಾರ್ಮಿಕರು, ಇತ್ಯಾದಿಗಳು ಅತ್ಯಂತ ಮುಖ್ಯವಾಗಿದ್ದು ಬಹು ಸಂಖ್ಯಾತ ನಾಗರಿಕರ ಜೀವನಕ್ಕೆ ನೇರವಾಗಿ ಸಂಬಂಧಿಸಿದ್ದರೂ ಅವುಗಳ ಕುರಿತು ಲಕ್ಷ್ಯ ಕೇಂದ್ರೀಕರಿಸುವುದಕ್ಕೆ ಯಾವ ಪತ್ರಿಕೆಯೂ ತನ್ನ ಬಾತ್ಮಿದಾರರನ್ನು ಹೊಂದಿಲ್ಲ ಪುಟಗಳನ್ನೂ ನಿಗದಿಮಾಡಿಲ್ಲ. ಇದರ ಫಲವಾಗಿ ಈ ಕ್ಷೇತ್ರಗಳಲ್ಲಿನ ಪತ್ರಿಕೋದ್ಯಮಿಗಳಿಗೆ ಇರುವ

ವಿಶೇಷ ಪರಿಶ್ರಮ ಅತ್ಯಲ್ಪ, ಹಾಗೆಂದೇ ಅವರು ಕಳುಹಿಸುವ ವರದಿಗಳು ಅಪರಿಪೂರ್ಣವಾಗಿರುತ್ತವೆ, ಜಾಳು ಜಾಳಾಗಿರುತ್ತವೆ, ಅನೇಕ ಸಲ ದಾರಿ ತಪ್ಪಿಸುತ್ತವೆ.

ಆಖೈರಾಗಿ ವಿಶ್ಲೇಷಿಸಿ ಹೇಳುವುದಾದರೆ, ಇವತ್ತು ಪತ್ರಿಕೆಗಳನ್ನು ಯಾರು ಹೊರತರುತ್ತಾರೋ, ಯಾರು ಅವುಗಳನ್ನು ಉಪಯೋಗಿಸುತ್ತಾರೋ ಅಂಥವರ ಆದ್ಯತೆಗಳನ್ನಷ್ಟೆ ಅವು ಪ್ರತಿಬಿಂಬಿಸುತ್ತವೆ. ಇದಕ್ಕೆ ಅತ್ಯಂತ ನಿರ್ದಿಷ್ಟವೆನ್ನುವಂಥ ಒಂದು ಉದಾಹರಣೆಯೆಂದರೆ, ಪದವಿಪೂರ್ವ ಹಂತದ ಶಿಕ್ಷಣದಿಂದ (ಇದನ್ನು +2 ಎನ್ನುತ್ತಾರೆ) ಮೇಲೇರಬೇಕಾದರೆ ಐದು ಜನ ಸ್ವದೇಶೀಯ ನಾಗರೀಕರನ್ನು ಅಕ್ಷರಸ್ಥರನ್ನಾಗಿ ಮಾಡಿದ ವಿದ್ಯಾರ್ಥಿಗಳಿಗೆ ಮಾತ್ರ ಅವಕಾಶ ಕೊಡಬೇಕೆಂಬ ಪ್ರಧಾನಿಗಳ ಸಲಹೆಗೆ ತನ್ನ ಓದುಗರ ಪ್ರತಿಕ್ರಿಯೆಯನ್ನು ಸ್ಥಳೀಯ ಪತ್ರಿಕೆಯೊಂದು ಕಿಂಚಿತ್ತೂ ತಡಮಾಡದೆ ಆಗಿಂದಾಗಲೇ ವರದಿ ಮಾಡಿರುವುದು.

ಇಂಥ ಸಲಹೆಗೆ ಮಧ್ಯಮ ವರ್ಗದ ಮತ್ತು ಮೇಲ್ವರ್ಗದ ಜನ ಸಿಡಿದೇಳುತ್ತಾರೆಂದು ಹೇಳಬೇಕಾಗಿಯೇ ಇಲ್ಲ. ಹಾಗಿದ್ದರೂ, ಬಂದ ಪ್ರತಿಕ್ರಿಯೆಗಳಲ್ಲಿ ಈ ಆಲೋಚನೆಯನ್ನು ಎಚ್ಚರಿಕೆಯಿಂದ ಅಂಗೀಕರಿಸುವ ಸಲಹೆಯೂ ಸೇರಿತ್ತು ಎಂಬುದು ವಿಶೇಷ. ಆದರೆ ಪತ್ರಿಕೆಯ ತಲೆ ಬರಹ ಮಾತ್ರ ಬಹುಮತದ ಅಭಿಪ್ರಾಯವನ್ನು ಹೀಗೆ ಎತ್ತಿ ತೋರಿಸಿದೆ : '' ತೀರ್ಪು : (10+2) + (1+5)=0, ಪ್ರಧಾನಿಯವರು ವಿದ್ಯಾರ್ಥಿಗಳಿಗೆ ಹೆಚ್ಚು ಭಾರ ಹೇರುವ ಆಲೋಚನೆಯನ್ನು ಗೇಲಿ ಮಾಡಿ ಪತ್ರಿಕಾ ಕಛೇರಿಗೆ ಕರೆಗಳು''.

ಈ ಪ್ರಶ್ನೆಯೆತ್ತಿಕೊಂಡು ಒಂದು ಮಿನಿ ಅಭಿಪ್ರಾಯ ಸಂಗ್ರಹಣೆಯನ್ನೆ ಮಾಡಲು ಕಷ್ಟಪಟ್ಟ ಆ ಪತ್ರಿಕೆಗೆ ಸ್ವಾತಂತ್ರ್ಯ ಬಂದ ಮೇಲೆ ಐವತ್ತು ವರ್ಷ ಕಳೆದಿದ್ದರೂ ದೇಶದ ಪ್ರಜಾಕೋಟಿಯ ಅರ್ಧ ಭಾಗದಷ್ಟು ಜನ ನಿರಕ್ಷರಿಗಳಾಗಿಯೇ ಉಳಿದಿರುವುದರ ಕುರಿತು ಸಹ ವಾಚಕರ ಪ್ರತಿಕ್ರಿಯೆಗಳನ್ನು ಪಡೆಯಬೇಕೆಂಬ ಔಚಿತ್ಯ ಕಾಣಲೇ ಇಲ್ಲ (ಆ ಪತ್ರಿಕಾಕರ್ತರು ಮತ್ತು ಪತ್ರಿಕೆಯ ವಾಚಕರಿಗೆ ಉತ್ತಮ ಗುಣಮಟ್ಟದ ಶಿಕ್ಷಣಕ್ಕೆ ಅವಕಾಶಗಳು ಸೌಲಭ್ಯಗಳು ಇರುವುದನ್ನು ಇಲ್ಲಿ ಹೇಳಬೇಕಾದುದು ಪ್ರಸ್ತುತವಾಗುತ್ತದೆ). ಅಷ್ಟೆ ಅಲ್ಲ, ರಾಷ್ಟ್ರ ಎದುರಿಸುತ್ತಿರುವ ಈ ಪ್ರಮುಖ ದೈತ್ಯ ಸಮಸ್ಯೆಗೆ ಪರಿಹಾರ ಕಾಣುವ ಪ್ರಯತ್ನದಲ್ಲಿ ನಾಗರೀಕರು ಹೇಗೆ ಕೈಜೋಡಿಸಬಹುದೆಂಬ ಆಲೋಚನೆಗಳನ್ನು ಮಾಡಿಸುವುದಕ್ಕೂ ಆ ಪತ್ರಿಕೆ ಮುಂದಾಗಲಿಲ್ಲ.

*ಅಮ್ಮು ಜೋಸೆಫ್‌ರವರು ಈ ಪ್ರಬಂಧವನ್ನು ನಮೀಬಿಯಾ ಫೌಂಡೇಷನ್, ಫ್ರೆಡ್ರಿಕ್ ಎಬರ್ಟ್ ಸ್ಟಿಫ್ಟಂಗ್, ಆ್ಯಕ್ಷನ್ ಏಡ್ ಮತ್ತು ಮಾಧ್ಯಮ್ ಏರ್ಪಡಿಸಿದ ವಿಚಾರ ಸಂಕಿರಣದಲ್ಲಿ ಮಂಡಿಸಿದರು. ಅಮ್ಮು ಜೋಸೆಫ್ ಬೆಂಗಳೂರಿನಲ್ಲಿ ನೆಲೆಸಿದ್ದು ಸ್ವತಂತ್ರ ಪತ್ರಿಕೋದ್ಯಮಿಯಾಗಿ, ಮಾಧ್ಯಮಗಳ ವಿಶ್ಲೇಷಕರಾಗಿ ಮತ್ತು ಸಂವಹನ ಸಲಹಾಕಾರರಾಗಿ ಕೆಲಸ ಮಾಡುತ್ತಿದ್ದಾರೆ. ಸಹೋದ್ಯೋಗಿ ಪತ್ರಿಕಾಕರ್ತೆ ಕಲ್ಪನಾ ಶರ್ಮಾ ರವರ ಜೊತೆಗೂಡಿ ("Whose News? Media and women's issues") (ಯಾರನ್ನು ಕುರಿತ ಸುದ್ದಿ? ಮಾಧ್ಯಮಗಳು ಮತ್ತು ಮಹಿಳಾ ಸಮಸ್ಯೆಗಳು) (Sage Publication ಸೇಜ್-ಪ್ರಕಾಶನ) ಎಂಬ ಗ್ರಂಥ ಸಂಪಾದಿಸಿದ್ದಾರೆ.*

*ಅನುವಾದ : ಎನ್. ವಿಶ್ವನಾಥ*

ಪರಿಚಯ

ಸರ್ವವ್ಯಾಪಿಯಾಗಿರುವ ಎಚ್.ಐ.ವಿ./ಏಡ್ಸ್ ಮತ್ತು ಹೆಂಗಸರ ಮೇಲೆ ಆಗುತ್ತಿರುವ ಹಿಂಸೆ ಶೋಷಣೆ, ಗಂಡಸರ ಲೈಂಗಿಕಾಸಕ್ತಿ ಹಾಗೂ ಪುರುಷತ್ವದ ಬಗ್ಗೆ ಪ್ರಶ್ನೆಗಳನ್ನು ಎತ್ತಿವೆ. ಅರಿವು, ಜ್ಞಾನ ಮತ್ತು ವರ್ತನೆಗಳ ನಡುವಿನ ಸಂಬಂಧಗಳೂ ಸಹ ಏಡ್ಸ್, ಲೈಂಗಿಕತೆ ಮತ್ತು ಲಿಂಗಸಂವೇದನೆ ವಿಚಾರಗಳಿಂದಾಗಿ ತೀವ್ರವಾಗಿ ಬೆಳಕಿಗೆ ಬರುತ್ತಿದೆ. ಚಿಕ್ಕ ವಯಸ್ಸಿನವರು ಇದಕ್ಕೆ ಬಲಿಯಾಗುವುದು ಹೆಚ್ಚು.

ಲಿಂಗ ಸಂಬಂಧಿತ ಅಧ್ಯಯನಗಳ ಹುಟ್ಟು, ಸ್ತ್ರೀ ಸಮಾನತಾವಾದ ಅನುಭವಗಳಲ್ಲಿ ಆರಂಭವಾಗಿ ಸ್ತ್ರೀ ಸಮಾನತಾವಾದ ಸಿದ್ಧಾಂತ ಮತ್ತು ಕ್ರಿಯಾವಾದದತ್ತ ನಡೆಯಿತು. ಮಹಿಳಾ ಬದುಕಿನ ಬಗ್ಗೆ ಎಂತಹ ತೀವ್ರಾಸಕ್ತಿ ಹಾಗೂ ಬಲವಾಗಿ ಅಧ್ಯಯನಗಳು ನಡೆದು ದಾಖಲಿಸಲಾಯಿತೋ, ಅಂತಹದಾವುದೂ ಪುರುಷರ ಬಗ್ಗೆ ನಡೆದಿಲ್ಲ. ನಮ್ಮ ಬದುಕಿನಲ್ಲಿ ನಡೆಯುವ ಸಾಮಾಜೀಕರಣ - ಸಮುದಾಯದ ಬದುಕು - ನಮ್ಮ ಲಿಂಗತ್ವವನ್ನು ಬೆಳೆಸಿದೆ. ಜನ ಜ್ಞಾನವನ್ನು ಬೆಳೆಸಿರುವುದು ಕೂಡಾ ಸಾಮಾಜೀಕರಣದಿಂದಲೇ. ಇಲ್ಲಿ ಹಲವಾರು ಪ್ರಶ್ನೆಗಳೇಳುತ್ತವೆ. ಗಂಡಸರು ಅದು ಹೇಗೆ ತಮ್ಮನ್ನು 'ನಾನು' ಎಂದುಕೊಂಡೂ ಹೆಂಗಸರನ್ನು 'ಬೇರೆ' ಎಂದು ತಿಳಿಯುವರು? ನಾವೇನಾದರೂ 'ಲಿಂಗ ಸಮತೆ' ತರಬೇಕೆಂದು ಕನಸು ಕಟ್ಟಿದರೆ 'ವ್ಯಕ್ತಿಗತವೆಂದರೆ ಅದು ರಾಜಕೀಯವೇ' ಎಂಬುದನ್ನು ಕಂಡುಕೊಂಡ ಮಹಿಳಾ ಚಳವಳಿಯ ವಿಚಾರಗಳು ಗಂಡಸರ ಬದುಕಿನಲ್ಲೂ ಒಂದುಗೂಡಬೇಕು.



*ಗಂಡಸರು ಅಧಿಕಾರವನ್ನೇ ಸಂಪೂರ್ಣವಾಗಿ ಅನುಭವಿಸುವುದಿಲ್ಲ. ಅಧಿಕಾರ ಇರುವುದು ಇಲ್ಲದಿರುವುದು ನಿರ್ಧಾರವಾಗುವುದು ಅವರು ಸಮಾಜದ ವಿವಿಧ ಸ್ತರಗಳಲ್ಲಿ ಎಲ್ಲಿದ್ದಾರೆ ಎಂಬುದರ ಮೇಲೆ.*

ಕ್ರೌರ್ಯ, ಹಿಂಸಾಚಾರ, ಪ್ರಮುಖವಾಗಿ ಗಂಡಸರದ್ದೇ ಆಗಿದೆ. ಇಲ್ಲಿ ಬರುವ ಪ್ರಶ್ನೆ, ಗಂಡಸರು ಕ್ರೌರ್ಯವನ್ನು ಹುಟ್ಟಿನಿಂದಲೇ ಹೊಂದುವರೇನು? ಜಗತ್ತಿನಾದ್ಯಂತ, ಹಿಂಸಾಚಾರ ಮತ್ತು ಮೇಲ್ಗೈ ಎಂಬುವುದು ಗಂಡಸರ ಸ್ವಭಾವವೇ ಆಗಿದೆ. ಗಂಡಸ್ತನವನ್ನು ಆಕ್ರಮಣಶೀಲತೆ ಮತ್ತು ಲೈಂಗಿಕ ವಿಕ್ರಮಗಳೊಡನೆಯೇ ಸೇರಿಸಿ ಹೇಳುವಾಗ, ಗಂಡು ಹೆಣ್ಣುಗಳ ನಡುವಿನ ಅಧಿಕಾರದ ಸಂಬಂಧದ ನಿರ್ಮಾಣ ಈ ಕ್ರೌರ್ಯ ಮತ್ತು ಲೈಂಗಿಕ ಮೇಲ್ಮೈ ಸ್ವಭಾವವನ್ನೇ ಆಧರಿಸಿಯೇ ನಡೆದಿದೆ. ಆದರೆ ಗಂಡಸರ ನಡುವೆಯೂ ಕೂಡಾ ಅಧಿಕಾರ ಮತ್ತು ಸ್ಥಾನಮಾನಕ್ಕೂ ಇದೆ ಮೂಲವಾಗಿದೆ.

ಕೇವಲ ಶರೀರ ರಚನೆಯಿಂದ ಒಬ್ಬರನ್ನು ಗಂಡಸು ಎನ್ನಲಾಗದು, ನಿಜವಾದ ಪುರುಷತ್ವವೆಂದರೆ ಬೇರೆಯೇ ಇದೆ ಎನ್ನುವ ಭಾವನೆ ಮೇಲಿಂದ ಮೇಲೆ ಬರುತ್ತಲೇ ಇರುತ್ತದೆ. ಜೀವಶಾಸ್ತ್ರಕ್ಕನುಗುಣವಾಗಿ ದೇಹ ಪ್ರಾಯಕ್ಕೆ ಸಹಜವಾಗಿ ಬರುವ ತಟಸ್ಥ ಸ್ಥಿತಿಯಲ್ಲ, ಬದಲಿಗೆ ಎಲ್ಲವನ್ನು ಎದುರಿಸಿ ಕೃತಕವಾಗಿ ಪಡೆಯಬೇಕಾದ ನವಿರಾದ ಸ್ಥಾನಮಾನ. ಈ ಅಸ್ಥಿರತೆಯೊಂದಿಗೆ ಬರುವ ಭಯಕ್ಕೆ, ಗಂಡಸರಿಗೆ ಈ ಲಿಂಗಭೇಧ ಸಮಾಜ ನೀಡಿರುವ ಅಧಿಕಾರ ಮತ್ತು ಸ್ಥಾನಮಾನವೂ ಕಾರಣವಾಗಿದೆ. ಹೀಗೆ ಗಂಡಸರು ಅಸ್ಥಿರತೆಯಲ್ಲಿದ್ದಾರೆ ಎನ್ನುವುದು ಅವರನ್ನು ಈ ದಬ್ಬಾಳಿಕೆ, ಬಲ ಪ್ರಯೋಗ ಮಾಡುವ ಸ್ವಭಾವದಿಂದ ಕೆಳಗಿಳಿಸುವುದಿಲ್ಲ. ಆದರೆ, ಈ ವಿದ್ಯಮಾನವನ್ನು ಅರ್ಥಮಾಡಿಕೊಳ್ಳಲು ಹಾಗೂ ನಮ್ಮ ಮಧ್ಯ ಪ್ರವೇಶಕ್ಕಿದು ಸಹಕಾರಿಯಾಗುವುದು.

ಮಹಿಳೆಯರಿಗಿಂತ ಪುರುಷರು ಮೇಲಿನ ಅಧಿಕಾರ ಹೊಂದಿದ್ದಾರೆ ಎಂದಾಗ ಇತರ ಗಂಡಸರ ಮೇಲೂ ಇವರು ಅಧಿಕಾರ ಹೊಂದಿದ್ದಾರೆ ಎಂಬುದೂ ನಿಜ. ಮೇಲ್ಮೈ ಸಾಧಿಸುವ ರಾಜಕೀಯವನ್ನು ಅರ್ಥಮಾಡಿಕೊಳ್ಳಲು ಇದು ಮುಖ್ಯ ಹಾಗೂ ಪುರುಷ ಸಮಾಜವನ್ನು ಪೋಷಿಸುತ್ತಿರುವುದು ಏನೆಂಬುದೂ ಆಗ ತಿಳಿಯುವುದು. ಅಧಿಕಾರದ ಅನುಭವದಲ್ಲಿ ಆಗಾಗ ಅದು ಮುರಿಯುವುದು, ಜಾರುವುದನ್ನು ನಾವೆಲ್ಲಾ ಅನುಭವಿಸಿರುತ್ತೇವೆ. ಗಂಡಸರು ಅಧಿಕಾರವನ್ನೇ ಸಂಪೂರ್ಣವಾಗಿ ಅನುಭವಿಸುವುದಿಲ್ಲ. ಅಧಿಕಾರ ಇರುವುದು ಇಲ್ಲದಿರುವುದು ನಿರ್ಧಾರವಾಗುವುದು ಅವರು ಸಮಾಜದ ವಿವಿಧ ಸ್ತರಗಳಲ್ಲಿ ಎಲ್ಲಿದ್ದಾರೆ ಎಂಬುದರ ಮೇಲೆ. ಹೀಗಾಗಿ ಪುರಷತ್ವವೆಂಬುದು ಅಧಿಕಾರದ ಅರ್ಹತೆ ಅನುಭೋಗ ಹೇಗೆ ಎನ್ನುವುದರ ಮೇಲೆ ಆಧರಿಸಿದೆಯೇ ವಿನಃ ಕೇವಲ ಅಧಿಕಾರದಿಂದಲ್ಲ. ಈ ಅರ್ಹತೆಯ ಭಾವನೆ ಹೇಗೆ ಬರುವುದು? ಎಂತಹ ಮಾಹಿತಿ, ಭಾವನೆ, ಶೈಕ್ಷಣಿಕ ಮಟ್ಟ, ಸಮಾಜೀಕರಣದ ರೀತಿ ಗಂಡು ಮಕ್ಕಳು ಮತ್ತು ಹೆಣ್ಣು ಮಕ್ಕಳ ನಡುವೆ ಈ ಅರ್ಹತೆಗೆ ದಾರಿಯಾಗುವುದು (ನಾನು ಮತ್ತು ಬೇರೆ).

ಗಂಡಸರ ಲೈಂಗಿಕತೆ ಮೂಲ ಸ್ವರೂಪದಿಂದಲೇ ಆಕ್ರಮಣಕಾರಿಯಾದುದು ಎಂದು ಎಲ್ಲಿ ದೃಢವಾದ ನಂಬಿಕೆ ಇದೆಯೋ ಹಾಗೂ ಗಂಡಸರಿಗೆ ಹಲವು ಸಂಗಾತಿಗಳೊಡನೆ ಲೈಂಗಿಕ ಚಟುವಟಿಕೆ ಬೇಕೇ ಬೇಕು ಎಂದು ಹೇಳುವರೋ, ಅದೇ ನಿಟ್ಟಿನಲ್ಲಿ, ಅಷ್ಟೇಗಟ್ಟಿಯಾಗಿ, ಹೆಂಗಸರು ಮಣಿಯುವವರು ಮತ್ತು ಹೆಂಗಸರ ಲೈಂಗಿಕ ಶಕ್ತಿ ಮಹತ್ತರವಾದುದು, ಹೀಗಾಗಿ ಅವರನ್ನು ಎಲ್ಲ ದೇಶಕಾಲಗಳಲ್ಲಿ ನಿಯಂತ್ರಣದಲ್ಲಿಟ್ಟುಕೊಳ್ಳಬೇಕೆಂಬ ನಂಬಿಕೆಯೂ ಇದೆ. ಲೈಂಗಿಕವಾಗಿ ಶ್ರೇಣೀಕರಿಸುವ ಮೂಲಕ ಮೇಲುಕೀಳೆಂಬ ವ್ಯವಸ್ಥೆಗೆ ಇದು ಅನುವಾಗುವುದು. ಉದಾಹರಣೆಗೆ, ದೇಶಗಳು ಪರಸ್ಪರ ಯುದ್ಧಕ್ಕೆ ಹೋರಟಾಗ, ಲೂಠಿ ಹೊಡೆಯುವುದು ಮತ್ತು ವಿರೋಧಿ ದೇಶದ ಹೆಂಗಸರ ಮೇಲೆ ಅತ್ಯಾಚಾರ ಮಾಡುವ ಮೂಲಕ ಮೇಲ್ಮೈ ತೋರಲೆತ್ನಿಸುವರು. ಲೈಂಗಿಕವಾಗಿ ಶೋಷಣೆಗೊಳಗಾದ ಹೆಣ್ಣಿಗೆ ನಮ್ಮ ದೃಶ್ಯ ಮಾಧ್ಯಮಗಳು ಕೇವಲ ನಾಲ್ಕೇ ನಾಲ್ಕು ರೀತಿಯ

ಆಯ್ಕೆಗಳನ್ನು ಮುಂದಿಡುತ್ತವೆ ಆತ್ಮಹತ್ಯೆ, ಲೈಂಗಿಕ ವೃತ್ತಿಗಿಳಿಯುವುದು, ಅತ್ಯಾಚಾರಿಯನ್ನೇ ಮದುವೆಯಾಗುವುದು ಅಥವಾ ಕುಟುಂಬದ ಗೌರವ ಘನತೆಯ ಹೆಸರಿನಲ್ಲಿ ಕುಟುಂಬದ ಗಂಡಸರಿಂದ ಅತ್ಯಾಚಾರಿಯ ಕೊಲೆ. ಕನ್ಯತ್ವ/ಶುದ್ಧತೆ/ಗೌರವ ಹೆಣ್ಣಿನ ಒಂದು ಅಂಗದಲ್ಲಿ ಅಡಗಿದೆ ಎಂದು ಯಾವುದೇ ಚಾರಿತ್ರಿಕ, ವೈಜ್ಞಾನಿಕ, ಧಾರ್ಮಿಕ ಅಥವಾ ಮನಃಶಾಸ್ತ್ರಸಂಬಂಧಿತ ಸಮರ್ಥನೆಗಳು ಇಲ್ಲ. ಇವು ಗಂಡಿನ ದೇಹಕ್ಕೇಕೆ ಇಲ್ಲ? ಈ ಭಾವನೆಗಳು ಪುರುಷ ಪ್ರಧಾನ ಸಮಾಜದಲ್ಲಿ ಬೆಳೆದು ಬಂದ ಬಾಲಕ ಬಾಲಕಿಯರ ತಿಳಿವಳಿಕೆಯ ಭಾಗ. ಹೀಗಾಗಿ, ಅತ್ಯಾಚಾರವೆಂದರೆ ಕನ್ಯತ್ವದ ವಿರುದ್ಧದ ಅಪರಾಧವೆಂದೇ ಕುಟುಂಬಗಳಲ್ಲಿ, ವ್ಯಕ್ತಿಗಳಲ್ಲಿ ಹಾಗೂ ವ್ಯವಸ್ಥೆಯ ಪ್ರತಿಕ್ರಿಯೆಯಾಗಿದೆ. ಅತ್ಯಾಚಾರ ಕನ್ಯತ್ವದ ವಿರುದ್ಧ ಅಪರಾಧವಲ್ಲ, ಅತ್ಯಾಚಾರ ವ್ಯಕ್ತಿಯ ವಿರುದ್ಧ ನಡೆಯುವ ಅಪರಾಧ. ನಮ್ಮ ಅರಿವು ಹೇಗೆ ಬೆಳೆದಿದೆ ಎಂಬುದನ್ನು ಈ ನಿದರ್ಶನ ಎತ್ತಿ ತೋರಿಸುತ್ತದೆ. ಜೊತೆಗೆ ಗಂಡಸರನ್ನು ಅಧ್ಯಯನ ಮಾಡಲು ಹಾಗೂ ಲಿಂಗಾಧಾರಿತ ಜೀವಿಗಳಂತೆ ಅವರೊಡನೆ ಕೆಲಸ ಮಾಡುವ ಅವಶ್ಯಕತೆಯನ್ನು ತೋರಿಸುತ್ತದೆ. ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಅದರಲ್ಲೂ ಗಂಡಸರ ಲೈಂಗಿಕ ವಿಚಾರಗಳ ಬಗ್ಗೆ ಸಾಕಷ್ಟು ಸಾಮಗ್ರಿಗಳಿಲ್ಲದ ಎಚ್.ಐ.ವಿ./ಏಡ್ಸ್ ಕೇಂದ್ರೀಕೃತ ಕೆಲಸಗಳಲ್ಲಿ ಗಂಡಸರ ಭಾಗವಹಿಸುವಿಕೆ, ಎಚ್.ಐ.ವಿ./ಏಡ್ಸ್ ವಿಚಾರದಲ್ಲಿ ಗಂಡಸ್ತನ ಹಾಗೂ ಗಂಡಸರ ಪಾತ್ರ ಎಂತಹದು ಎಂಬುದನ್ನು ಗಮನಿಸುವ ಆವಶ್ಯಕತೆಯನ್ನು ಇದು ತೋರುತ್ತದೆ.

**ಬೆಳೆಯುವ ಗಂಡು ಹುಡುಗರು** (ಕೃಷ್ಣಕುಮಾರ್ ಅವರ ಲೇಖನದಿಂದ ಉಲ್ಲೇಖ) - ಶಿಕ್ಷಣದ ಪಾತ್ರ

'ಒಂದು ಹೆಣ್ಣಿನ ಸ್ಥಿತಿಗತಿ ಮತ್ತು ಸಮಸ್ಯೆಗಳ ಜೊತೆ ಗಂಡು ಹೇಗೆ ಸಂಬಂಧಿಸುತ್ತಾನೆ ಎಂಬುದನ್ನು ತಿಳಿಯಲು ಇರುವ ಒಂದು ಸುಲಭ ವಿಧಾನ, ಗಂಡು ಮಕ್ಕಳು ಬೆಳೆದು ಹೇಗೆ ಯುವಕರಾಗುತ್ತಾರೆ ಎಂಬುದನ್ನು ಗಮನಿಸುವುದು. ಗಂಡು ಮಕ್ಕಳಿಗಾಗಿ ಸಮಾಜದೊಡನೆ ಅವರ ಹೊಂದಾಣಿಕೆಗಳು ಹೆಂಗಸರನ್ನು ಅವಲಂಬಿಸಿದೆ. ಇದು ಬಹುಮುಖ್ಯವಾಗಿ, ಅವರು ಗಂಡಸರಾಗಲು, ಹೆಣ್ಣಿನ ಬಗ್ಗೆ ಈಗಾಗಲೇ ಇರುವ ಕೆಲವು ಸಿದ್ಧ ನಿಲುವುಗಳನ್ನು ಅವಲಂಬಿಸಿಯೇ ನಡೆದುಕೊಳ್ಳಬೇಕು'.

ಮಧ್ಯಪ್ರದೇಶದ ಒಂದು ಹಳೆಯ ರಾಜವಂಶದ ರಾಜ್ಯದ ಪುಟ್ಟದೊಂದು ಊರಿನ ಅನುಭವ ಈ ವಿಚಾರವನ್ನು ಹೇಗೆ ತೋರಿಸುವುದೆಂದು ಕೃಷ್ಣಕುಮಾರ್ ಹೇಳುತ್ತಾರೆ. ''ಪ್ರಾಥಮಿಕ ಶಾಲಾ ಮಟ್ಟದಲ್ಲಿ ಬಾಲಕರು ಬಾಲಕಿಯರು ಒಂದೇ ಶಾಲೆಗೆ ಹೋಗಿ ಅಲ್ಲಿ ಕಲಿಸುವ ಕೌಶಲ್ಯ ಆಧಾರಿತ ಒಂದೇ ರೀತಿಯ ಚಟುವಟಿಕೆಗಳನ್ನು ಕಲಿಯುತ್ತಾರೆ. ಪ್ರೌಢಶಾಲಾ ಮಟ್ಟಕ್ಕೆ ಕಾಲಿಟ್ಟೊಡನೆಯೇ ಹುಡುಗರನ್ನು ಹುಡುಗಿಯರಿಂದ ಬೇರ್ಪಡಿಸುವುದಷ್ಟೇ ಅಲ್ಲ, ಅಲ್ಲಿ ಪಾಠಮಾಡುವವರೆಲ್ಲಾ ಗಂಡಸರೇ. ಮೊದಮೊದಲು ಈ ದಿಢೀರ್ ಪ್ರತ್ಯೇಕತೆಗೆ ಯಾವ ಅರ್ಥವೂ ಕಂಡಿರಲಿಲ್ಲ; ಮುಂದೆ ಇದೇ ಹೆಣ್ಣೆಂದರೆ ಒಂದು ಒಗಟು ಎಂಬಂಥ ಭಾವನೆ ಬೆಳೆಸಿತು; ಮುಂದೆ ಇದು ಕಂಡದ್ದು, ಗಂಡು ಹುಡುಗರು ಹೆಣ್ಣು ದೇಹದೊಡನೆ ಸಂಪರ್ಕ ಸಾಧಿಸಲು ಸಿದ್ಧವಾಗುವ ತನಕ ಹಾಗಾಗುವ ಅಪಾಯ ತಪ್ಪಿಸಲು ಸಮಾಜ ನೀಡುವ ರಕ್ಷಣೆ ಎಂದು ಒಪ್ಪಿಕೊಳ್ಳಲಾಯಿತು. ಈ ತರ್ಕ ಬೆಳೆಯಲು ವರ್ಷಗಳೇ ಬೇಕಾದವು ; ವಿಪರೀತವಾದ ಮಾನಸಿಕ ಶಿಕ್ಷೆಯನ್ನು ತೆಗೆದುಕೊಂಡ ಅದೊಂದು ಕ್ಲಿಷ್ಟವಾದ ಪ್ರಕ್ರಿಯೆಯಾಗಿತ್ತು. ಜೊತೆಗೆ ಹುಡುಗಿಯರು ಮತ್ತು ಹುಡುಗರಿಂದ ಅವರನ್ನೇಕೆ ಬೇರ್ಪಡಿಸಲಾಗಿದೆ ಎಂಬ ದೊಡ್ಡ ರಹಸ್ಯದ ಬಗ್ಗೆ ಪ್ರಶ್ನಿಸಿ ತಿಳಿಯಲು ಯಾವುದೇ ವಯಸ್ಕರೂ ಸಿಗುತ್ತಿರಲಿಲ್ಲ. ಹುಡುಗರ ಶಾಲೆಗಿಂತ ಭಿನ್ನವಾಗಿ ರಚಿಸಿದ್ದ ಶಾಲೆಗೆ ಹುಡುಗಿಯರು ಹೋಗುತ್ತಿದ್ದರು. ಶಾಲೆಯ ಮಧ್ಯದ ರಕ್ಷಿತ ಪ್ರದೇಶದಲ್ಲಿ ಹೊರ ಜಗತ್ತಿನೊಂದಿಗೆ ಸಂಪರ್ಕವೇ ಇಲ್ಲದೆ ಹುಡುಗಿಯರು ಆಡಿಕೊಳ್ಳುತ್ತಿದ್ದರು. ಸುತ್ತಲೂ ತರಗತಿಗಳು, ಮರಗಳು ಮತ್ತು ದೊಡ್ಡ ಗೋಡೆಯಿದ್ದ ಹೆಣ್ಣು ಮಕ್ಕಳ ಶಾಲೆಗೆ ಪ್ರವೇಶಿಸಲು ಮತ್ತು ನಿರ್ಗಮಿಸಲು ಮಾತ್ರ ತೆರೆಯುತ್ತಿದ್ದ 20 ಅಡಿ ಎತ್ತರದ ಬಾಗಿಲು (ಗೇಟ್) ಒಂದೇ ಮಾರ್ಗ. ಹುಡುಗರ ಶಾಲೆಗೆ ಅಂತಹ ಯಾವುದೇ ರಕ್ಷಿತ ಪ್ರದೇಶವಾಗಲೀ ಮುಖ್ಯ ಪ್ರವೇಶದ್ವಾರವಾಗಲೀ ಇರಲಿಲ್ಲ. ಅವರ ಆಟದ ಮೈದಾನ ಒಂದು ಶಾಲಾ ಪಕ್ಕದ ಪ್ರದೇಶ, ಅಲ್ಲಿ ಯಾವುದೇ ರೀತಿಯ ಬೇಲಿ ಗೋಡೆಯ ಕುರುಹೂ ಇಲ್ಲ. ಈ ರೀತಿ ಬಾಲಕರ ಮತ್ತು ಬಾಲಕಿಯರ ಶಾಲೆ ಕಟ್ಟಡ ವಿನ್ಯಾಸವೇ ನಮ್ಮ ಶಾಲಾ ಸಂಸ್ಕೃತಿಯ ಭಾಗವಾಗಿದ್ದು ಅದು ಈಗಲೂ ಚಾಲ್ತಿಯಲ್ಲಿದೆ. ಸಂಜೆ ಹೊತ್ತು, ಹೆಣ್ಣು ಮಕ್ಕಳು ಗುಂಪು ಗುಂಪಾಗಿ ಸದ್ದಿಲ್ಲದೆ ಕಿರಿದಾದ ಓಣಿಗಳಲ್ಲಿ ನಡೆದು ಮನೆಗೆ ಹೋಗುವುದನ್ನು ಹುಡುಗರು ನೋಡುತ್ತಿದ್ದರು. ರಸ್ತೆಗಳನ್ನು ಹುಡುಗರು ಹಲವಾರು ರೀತಿ ಉಪಯೋಗಿಸುತ್ತಿದ್ದರು - ನಿಂತು ನೋಡಲು, ಓಡಲು, ಆಡಲು. ಹುಡುಗಿಯರಿಗೆ ರಸ್ತೆ, ಶಾಲೆಯಿಂದ ನೇರವಾಗಿ ಮನೆಗೆ ಹೋಗಲೊಂದು ಮಾರ್ಗವಷ್ಟೆ. ಅಂತಹ ತೀರಾ ಮಿತಿಯಾದ ಬಳಕೆಗೂ ಅವರು ಯಾವಾಗಲೂ ಗುಂಪುಗುಂಪಾಗಿಯೇ ಹೋಗಬೇಕಿತ್ತು. ಹುಡುಗಿಯರು ಹೀಗೆ



ಗುಂಪು ಗುಂಪಾಗಿ ರಸ್ತೆಯಲ್ಲಿ ಹೋಗುವುದನ್ನು ವರ್ಷಗಟ್ಟಲೆ ನೋಡಿದ್ದ ಹುಡುಗರಿಗೆ, ಪ್ರತಿಯೊಬ್ಬರಲ್ಲೂ ವ್ಯಕ್ತಿತ್ವವಿದೆ ಎಂಬುದೇ ಅಳಸಿಹೋಗಿ, ಹುಡುಗಿಯರೆಂದರೆ ವ್ಯಕ್ತಿ ಎಂಬುದೇ ಮರೆತುಹೋಯಿತು. ಈ ರೀತಿಯ ರಚನೆ ಅತ್ಯಂತ ದುಃಖಕರ ಬೆಳವಣಿಗೆ. ಏಕೆಂದರೆ ಅದರಲ್ಲಿ ಮನುಷ್ಯತ್ವವೇ ಇಲ್ಲ. ಹುಡುಗಿಯರೆಂದರೆ ಒಂದು ವಸ್ತು ಎಂದೇ ನಂಬಿ ಬೆಳೆದ ಹುಡುಗರಲ್ಲಿ, ಹೆಣ್ಣುಗಳೊಂದಿಗೆ ಸ್ನೇಹಪರವಾಗಿರುವ ಹಾಗೂ ಆ ಸಂಬಂಧದಿಂದ ತನ್ನ ಜೀವನ ಬೆಳೆಸಿಕೊಳ್ಳುವ ಸಾಧ್ಯತೆಯೇ ನಾಶವಾಗುತ್ತದೆ. ಸದಾ ಮೇಲೆರಗುವ ಸ್ವಭಾವ ಮತ್ತು ಕ್ರೂರವಾಗಿ ಕಾಣುವ ಅಭಿಲಾಶೆ ಜೊತೆಗೆ ಹೆಣ್ಣಿನ ಬಗ್ಗೆ ಇರುವ ಅತೀವವಾದ ಭಯವೂ ಸಹ ಹುಡುಗರು ಪ್ರೌಢಶಾಲೆಯ ಅಂತಿಮ ಹಂತಕ್ಕೆ ಬರುವ ಹೊತ್ತಿಗೆ ಗಟ್ಟಿಯಾಗಿರುತ್ತದೆ. ಹೆಣ್ಣಿನ ಹತ್ತಿರ ಹೋಗಲು ಮದುವೆಯೊಂದೇ ಸಾಧನವಾಗಿ ಅವರಿಗೆ ಕಂಡು ಬರುತ್ತಿತ್ತು. ಆದರೆ ಅದು ಸಾಧಿಸಲಾಗದಂತಹ ಸವಾಲು ಮತ್ತು ವೈಯಕ್ತಿಕವಾಗಿ ತೆಗೆದುಕೊಳ್ಳುವ ಅಪಾಯಕಾರಿ ಹೆಜ್ಜೆ ಎಂಬ ಕಳವಳಕಾರಿ ಸ್ಥಿತಿಯೇ ಆಗಿರುವುದು ಒಂದು ವ್ಯಂಗ್ಯ. ಈ ಸವಾಲು ಅಥವಾ ಅಪಾಯ ಏನು ಎಂದು ಯಾರಿಗೂ ಗೊತ್ತಿರುವಂತಿಲ್ಲ. ಆದರೆ, ನೀವು ಹೆಣ್ಣಿನೆದುರು ಸೋಲಬಾರದೆಂದರೆ, ಅವಳ ಮೇಲೆ ಅಧಿಕಾರ ಸ್ಥಾಪಿಸಬೇಕು ಎಂಬುದಂತೂ ಪ್ರಶ್ನಾತೀತವಾದ ತಾಂತ್ರಿಕ ಜ್ಞಾನ. ಮದುವೆಯ ನಂತರ ಲೈಂಗಿಕ ಜೀವನದಲ್ಲಿ 'ಗೆಲುವು' ಸಾಧಿಸಲೇಬೇಕೆಂಬ ಬಯಕೆ ಒಂದು ಸಾಂಸ್ಕೃತಿಕ ರಚನೆ. ಇದರ ಬಹುಸಂಖ್ಯಾತ ಬೇರುಗಳಲ್ಲಿ ಒಂದನ್ನಾದಾರೂ ನಮ್ಮ ಶಾಲಾ ಕಾಲೇಜುಗಳ ಸಂಸ್ಕೃತಿಯಲ್ಲಿ ಕಾಣಬಹುದು. ಇಲ್ಲಿ ಲಿಂಗಗಳಿಗನುಗುಣವಾಗಿ ಪ್ರತ್ಯೇಕಮಾಡುವುದಷ್ಟೆ ಅಲ್ಲ, ಲೈಂಗಿಕ ಸ್ವಭಾವಗಳಿಗೆ ಗಮನಕೊಡದಿರುವುದು ಮತ್ತು ಪಠ್ಯ ಪುಸ್ತಕಗಳಲ್ಲಿ ಹೆಣ್ಣು ಗಂಡುಗಳ ಪಾತ್ರದ ಬಗ್ಗೆ ಏಕತಾನತೆಯಿಂದಲೂ ಇವು ಆಗಿವೆ. ಪ್ರೌಢಾವಸ್ಥೆಗೆ ಬರುತ್ತಿರುವ ಹುಡುಗರು ಕಲಿಯಲೇ ಬೇಕಾದ ಮುಖ್ಯ ವಿಚಾರ ಹೆಣ್ಣುಗಳನ್ನು ವಸ್ತುಗಳಾಗಿ ಗುರುತಿಸಬೇಕೆಂಬುದು. ಇಂತಹ ಕಲಿಕೆಗೆ ಹಲವಾರು ದಾರಿಗಳಿವೆ. ಆದರಲ್ಲಿ ಬಹು ಮುಖ್ಯವಾದುದು ಇತರ ಹುಡುಗರೇ. ಹುಡುಗಿಯರೊಂದಿಗೆ ಅವರ ಸಂಪರ್ಕ ತೀರಾ ಕಡಿಮೆ. ಅಂದರೆ, ಅವರ ಬಳಗದಲ್ಲಿ ಬಿಟ್ಟರೆ ಹೊರಗಿನ ಯಾವುದೇ ಹುಡುಗಿಯರೊಡನೆ ಅವರು ಮಾತು ಕೂಡಾ ಆಡಿರುವುದಿಲ್ಲ. ಆದರೆ, ತಾವು ಮಾತನಾಡಿಸುವ ಸಾಧ್ಯತೆಯೇ ಇಲ್ಲದ ನೂರಾರು ಸಾವಿರಾರು ಹುಡುಗಿಯರನ್ನವರು ತಮ್ಮ ದಿನ ನಿತ್ಯದ ಜೀವನದಲ್ಲಿ ನೋಡುತ್ತಲೇ ಇರುತ್ತಾರೆ. ಕೆಲ ಹುಡುಗರಂತೂ, ಹೆಣ್ಣು ಎಂದರೆ ಲೈಂಗಿಕ ಆನಂದವನ್ನು ಪಡೆಯುವ ಅಥವಾ ಹಿಂಸೆಗೆ ಇಷ್ಟಪಡುವ ಒಂದು ವಸ್ತುವನ್ನಾಗಿ ಚಿತ್ರಿಸಿರುವ ಅಶ್ಲೀಲ ಲೈಂಗಿಕ ಸಾಹಿತ್ಯದಿಂದ ಹೆಣ್ಣಿನ ಬಗ್ಗೆ ತಿಳಿಯುತ್ತಾರೆ. ಇದರಷ್ಟೇ ಗಟ್ಟಿಯಾಗಿ ಪ್ರಭಾವ ಬೀರಿರುವುದು ಲೈಂಗಿಕ ಸಂಭೋಗವನ್ನೇ ಬಿಂಬಿಸುವ ಬೈಯ್ಗಳ ಮಾತುಗಳು. ಮಕ್ಕಳೂ ಸಹ ದೊಡ್ಡವರಾಗಲಿ, ಶಿಕ್ಷಕರಾಗಲಿ ಯಾರ ಎಗ್ಗಿಲ್ಲದೆ ಇವನ್ನೆಲ್ಲಾ ಬಳಸುತ್ತಾರೆ. ಯಾರ ಮೇಲೆ ಸಂಭೋಗ ಪ್ರಯೋಗ ಮಾಡುತ್ತಾರೋ ಅದನ್ನವಲಂಬಿಸಿ ಗಂಡಸರನ್ನೂ ಶಕ್ತಿ ಸಾಮರ್ಥ್ಯವಿರುವ ಅಥವಾ ಅಧೋಗತಿಗಿಳಿದವರು ಎಂಬ ಮಟ್ಟಗಳ ಗುಂಪುಗಳಲ್ಲಿ ನೋಡಬೇಕೆಂದೂ ಕಲಿತಿರುತ್ತಾರೆ. ಹೀಗೆ, ಹುಡುಗಿಯರು, ಹೆಂಗಸರು ಎಂದರೆ ಲೈಂಗಿಕ ವಸ್ತುಗಳು, ಅವರಿಗೆ ಅವರದೇ ಆದ ಆಸೆ ಆಕಾಂಕ್ಷೆಗಳಿರುವ ಜೀವನವೆಂಬುದು ಇರುವುದೇ ಇಲ್ಲ ಎಂಬಂತಹದೇ ಮಾತುಗಳಿಂದ ಹೆಣ್ಣನ್ನು ಚಿತ್ರಿಸುವ ಬಲವಾದ ಚರ್ಚೆಗಳಿಂದ ಹುಡುಗರು ಸುತ್ತುವರಿದಿರುತ್ತಾರೆ. ಮಕ್ಕಳನ್ನು ಸಮಾಜದಲ್ಲಿ ಬೆರೆಯುವಂತೆ ಮಾಡಲು ಶಾಲೆ ಮತ್ತು ಸಮುದಾಯ ಪರಸ್ಪರರಿಗೆ ಸಹಾಯಕರಾಗಿರಬೇಕು ಎಂಬುದು ಸಮುದಾಯದಲ್ಲಿರುವ ಭಾವನೆ. ಇಂತಹ ಪಾರಸ್ಪರಿಕ ನಿಯಮವನ್ನು ಒಪ್ಪಿದ್ದಲ್ಲಿ ಈಗಿರುವ ಲಿಂಗ ಛಾಪನ್ನು ಶಿಕ್ಷಣದ ಮೂಲಕ ಬದಲಿಸಲು ಸಾಧ್ಯತೆಯೇ ಇಲ್ಲ. ಅಂದರೆ ಬಲವಾಗಿ ನಿಂತಿರುವ ಲಿಂಗಾಧಾರಿತ ಪಾತ್ರಭಾವಗಳನ್ನು ಶಿಕ್ಷಣದ ಮೂಲಕ ಬದಲಿಸುವ ಬಗ್ಗೆ ನಂಬುವಂತೆಯೇ ಇಲ್ಲ. ಹೀಗಿದ್ದಾಗ್ಯೂ, ಶಿಕ್ಷಣ ಬದಲಾವಣೆಗೊಂದು ಸಾಧನ ಎಂಬುದನ್ನು ಜಗತ್ತಿಗೆಲ್ಲಾ ಸಾರಲು ಶಿಕ್ಷಣವಂತೂ ಹಿಂದೆ ಬೀಳುವುದಿಲ್ಲ. ಈ ದ್ವಂದ್ವದಿಂದ ಹೊರಬರಲು ಇರುವ ಒಂದು ದಾರಿ, ಶಾಲಾ ಕ್ಷೇತ್ರವನ್ನು ಈಗಿರುವ ಸಾಮಾಜೀಕರಣ ಶಕ್ತಿಗಳ ವಿರುದ್ಧವಾಗಿ ಮುಂದಿಡುವುದು. ಅಂದರೆ, ಶಾಲೆಯನ್ನು ಸಮುದಾಯದ ನೀತಿ ನಿಯಮಗಳೊಂದಿಗೆ ಸಂಘರ್ಷಕ್ಕಿಳಿದಂತೆ ಪರಿಗಣಿಸಬೇಕು. ಈ ಆಲೋಚನಾ ಸರಣಿ, ಲಿಂಗಾಧಾರಿತ ವಿಚಾರಗಳನ್ನರಿಯಲು ಶಾಲೆ ಎಂತಹ ಅಸಾಮಾಜೀಕರಣದ ಪಾತ್ರ ವಹಿಸಬೇಕು ಎಂಬುದರ ಬಗ್ಗೆ ಬೆಳಕು ಚೆಲ್ಲುತ್ತದೆ. ಹದಿಹರೆಯದವರನ್ನೂ ಬೇರೆ ಬೇರೆ ಲಿಂಗಗಳಲ್ಲಿ ವಿಭಾಗಿಸಬೇಕೆಂದು ಸಮುದಾಯ ನಂಬಿದರೆ, ಎರಡೂ ಲಿಂಗಗಳನ್ನು ಬೆರೆಸಿ ನಡೆಸುವ ಶಾಲೆಯ ಮೂಲಕ ಪರ್ಯಾಯಗಳನ್ನು ಮುಂದಿಡಬೇಕು. ಹಾಗೆಯೇ, ಶಾಲೆಯಲ್ಲಿ ಕೆಲಸ ಮಾಡುವ ದೊಡ್ಡವರು ಏಕಪ್ರಕಾರ ವಿಧಾನದಲ್ಲಿ ನಡೆಯುವುದಿಲ್ಲ ಮತ್ತು ಅದನ್ನು ಹೇರದಂತೆ ಶಾಲೆ ನೋಡಿಕೊಳ್ಳಬೇಕು. ಶಾಲೆಯ ಹೊರಗೆ ಲೈಂಗಿಕ ವಿಚಾರಗಳಿಗಂತೂ ನಿಶೇಧವಿದ್ದೇಯಿದೆ. ಶಾಲೆಯಲ್ಲಿ ಆ ಅರಿವಿಗೆ ಅವಕಾಶವಿರಬೇಕು. ಶಾಲಾ ಮಾಧ್ಯಮಗಳು - ಪಠ್ಯಪುಸ್ತಕಗಳು ಇತ್ಯಾದಿ - ಮಾನವ ಜೀವಿಗಳನ್ನು ಅವರವರನ್ನು ಗುರುತಿಸಿಕೊಳ್ಳಲು ನಿರಂತರ ಹೋರಾಟದಲ್ಲಿರುವವರು ಎಂಬುದನ್ನು ಬಿಂಬಿಸುವಂತಹ ಗುರುತು ಸಂಕೇತಗಳನ್ನು ನೀಡಬೇಕೇ ಹೊರತು, ಹಳಸಾದ ಅದದೇ ಮಾತುಗಳನ್ನು ಪುನರುಚ್ಚರಿಸುವಂತಿರಬಾರದು. ಕೊನೆಯದಾಗಿ, ಈಗಿರುವ ಸ್ಥಿತಿಯನ್ನು ಒಪ್ಪುವುದಾದರೆ, ಮತ್ತು

> *ಹುಡುಗಿಯರು, ಹೆಂಗಸರು ಎಂದರೆ ಲೈಂಗಿಕ ವಸ್ತುಗಳು, ಅವರಿಗೆ ಅವರದೇ ಆದ ಆಸೆ ಆಕಾಂಕ್ಷೆಗಳಿರುವ ಜೀವನವೆಂಬುದು ಇರುವುದೇ ಇಲ್ಲ ಎಂಬಂತಹದೇ ಮಾತುಗಳಿಂದ ಹೆಣ್ಣನ್ನು ಚಿತ್ರಿಸುವ ಬಲವಾದ ಚರ್ಚೆಗಳಿಂದ ಹುಡುಗರು ಸುತ್ತುವರಿದಿರುತ್ತಾರೆ.*

ಸಮಾಜಕ್ಕೆ ಈ ನಿಮಯಗಳು ಪಥ್ಯವಾದಲ್ಲಿ, ಶಾಲೆಯಲ್ಲಿ ಕೇಳಿ ತಿಳಿದು ಕಲಿಯುವ ಗುಣವನ್ನು ಬೆಳೆಸುವ ವಾತಾವರಣ ಸೃಷ್ಟಿಸುವುದಕ್ಕೆ ಬೇಡಿಕೆ ಸಲ್ಲಿಸಬೇಕು''.

**ಗಂಡಸ್ತನ ಬೆಳೆಸಿಕೊಳ್ಳುವುದು (ರಾಹುಲ್ ರಾಯ್ ಅವರಿಂದ ಉಧೃತ)**

ಬಹಳಷ್ಟು ಬಾರಿ ಗಂಡಸ್ತನವೆಂದರೆ ಅಧಿಕಾರ/ಶಕ್ತಿಯನ್ನು ಅನುಭವಿಸುವುದು ಎಂದೇ ಹೇಳಲಾಗುತ್ತದೆ. ಆದರೂ, ಗಂಡಸ್ತನವೆಂಬುದು ಬಹುತೇಕ ಅಧಿಕಾರವನ್ನು ಹಿಡಿಯುವ ಅನುಭವದಲ್ಲಿದೆ. ಗಂಡಸರಿಗೆ ಪರಮಾಧಿಕಾರದ ಅನುಭವವಾಗುವುದಿಲ್ಲ ಮತ್ತು ಅಧಿಕಾರವಿರುವ ಅಥವಾ ಇಲ್ಲದಿರುವ ಅನುಭವವು ಸಾಮಾಜಿಕ ಸ್ತರಗಳಲ್ಲಿ ಅವರೆಲ್ಲಿದ್ದಾರೆ ಎಂಬುದನ್ನು ಅವಲಂಬಿಸುತ್ತದೆ. ಹೀಗೆಂದು ಗಂಡಸರಿಗೆ ಅಧಿಕಾರವೇ ಇಲ್ಲ ಎಂದು ಕೊಳ್ಳಬಾರದು. ಗಂಡಸರು ಒಂದು ಸಮೂಹವಾಗಿ ಹೆಂಗಸರ ಮೇಲೆ ಅಧಿಕಾರ ಹೊಂದಿದರೆ, ಉಳಿದಂತೆ, ಅವರವರ ವರ್ಗ, ಜಾತಿ, ಜನಾಂಗ, ಲೈಂಗಿಕ ಅನುಭವವೇ ಮೊದಲಾದುವನ್ನೂ ಅವಲಂಬಿಸಿ ಅಧಿಕಾರ ಹೊಂದಿರುತ್ತಾರೆ. ಆದರೆ ಇದಾವುದೂ ಪೂರ್ಣಾಧಿಕಾರವಲ್ಲ. ಹೆಂಗಸರ ಮೇಲೆ ಗಂಡಸರ ದಬ್ಬಾಳಿಕೆ ಮತ್ತು ಕ್ರೌರ್ಯ, ತಮಗಿರುವ ಅಧಿಕಾರದ ಪ್ರದರ್ಶನವಲ್ಲ. ಬದಲಿಗೆ, ತಮಗೆ ಈ ಅಧಿಕಾರ ಸಿಗಲು ನಡೆಸುವ ಯತ್ನ. ಅಧಿಕಾರ ಕುರಿತಾಗಿ ಇರುವ ಈ ದ್ವಂದ್ವಗಳು ವ್ಯಕ್ತಿನಿಷ್ಠ ಅನುಭವವಾಗುವ ಬದಲು ಗಂಡಸರಿಗೆ ವಸ್ತುನಿಷ್ಠ ವಿಚಾರಗಳಾದಾಗ ಮಾತ್ರ ಪುರುಷ ಪ್ರಧಾನ ಸಮುದಾಯದ ಲಿಂಗ ವ್ಯವಸ್ಥೆಗಳನ್ನು ಉರುಳಿಸಲು ಯತ್ನಿಸಬಹುದು.

ಲಿಂಗಗಳನ್ನು ಕುರಿತು ವೈಚಾರಿಕ ಸ್ವಭಾವ ಚಿಂತನೆ ಹಾಗೂ ಅಧಿಪತ್ಯ ಸಾಧಿಸಲು ಒಳಗೊಳಗೇ ನಡೆಯುವ ಸಂಧಾನ ಸಮಾಲೋಚನೆಗಳ ಫಲ, ಜಡತ್ವ ಹೊಂದಿದ ಲಿಂಗಾಧಾರಿತ ಪಾತ್ರಗಳ ನಿರ್ಮಾಣ ವಾಗುವುದನ್ನು ತಪ್ಪಿಸಿ, ಅಧಿಕಾರವೆಂದರೆ ಇರುವ ವಿವಿಧ ಅರ್ಥಗಳು, ವ್ಯಾಖ್ಯಾನಗಳು ಅನುಭವಗಳ ಆಧಾರದ ಮೇಲೆ ನಿರ್ಧರಿತವಾಗಬೇಕು. ಕೌಟುಂಬಿಕ ವ್ಯವಸ್ಥೆ ಜಾತಿ ಮತ್ತು ಪಂಗಡಗಳು ಬಹಳ ಮುಖ್ಯವಾಗಿರುವ ದಕ್ಷಿಣ ಏಷ್ಯಾದಲ್ಲಿ ಗಂಡಸು ಎಂದರೆ ಅನೇಕ ಗುರುತರ ಜವಾಬ್ದಾರಿಗಳು, ಕರ್ತವ್ಯಗಳನ್ನು ಹೊರುವ ಹಾಗೂ 'ಗಂಡಸು' ಎಂದರೆ ಎಲ್ಲರೂ ಹೇಳುವ-ಬಲಶಾಲಿ, ಎಲ್ಲವನ್ನೂ ಹತೋಟಿಯಲ್ಲಿಟ್ಟುಕೊಂಡಿರುವ, ಎಲ್ಲವನ್ನೂ ಮಾಡುವ, ಮನೆಯ ಆಧಾರಸ್ತಂಭ, ಆದಾಯ ತರುವವ, ಒಳ್ಳೆಯ ಮಗ, ಧೈರ್ಯಶಾಲಿ ಸೈನಿಕ ಮತ್ತು ಎಂದೂ ಬತ್ತದ ವೀರ್ಯವಂತ ಎಂಬುದರಿಂದ ಅಳೆಯಲಾಗುತ್ತದೆ ಎಂಬ ಭಯದಲ್ಲೇ ಬದುಕಬೇಕಾಗುತ್ತದೆ. ಹೀಗಾಗಿ, ಪುರುಷತ್ವವೆಂದರೆ ಕೇವಲ ಲಿಂಗಾಧಾರಿತ ಪಾತ್ರಗಳಲ್ಲ ಬದಲಿಗೆ, ಸದಾ ಚಾಲ್ತಿಯಲ್ಲಿರುವ ಸಾಮಾಜಿಕ ವ್ಯವಸ್ಥೆಗಳು, ನಿರ್ದಿಷ್ಟ ಸಾಮಾಜಿಕ ನಡಾವಳಿಕೆಗಳು, ನಿರ್ದಿಷ್ಟ ಚಾರಿತ್ರಿಕ ಸ್ಥಿತಿಗತಿಗಳ ಹಿನ್ನೆಲೆಯಲ್ಲಿ ರಚಿಸಲ್ಪಟ್ಟ ಸದಾ ಬಲಿಯುತ್ತಿರುವ ಪ್ರಕ್ರಿಯೆ ಎಂಬುದಾಗಿದೆ. ಈ ಪುರುಷತ್ವಕ್ಕೆ ಯಾವಾಗಲೂ ಸವಾಲುಗಳು ಇದ್ದೇ ಇರುತ್ತದೆ, ಮತ್ತೆ ಮತ್ತೆ ಬದಲಾಗುತ್ತಾ ಅಥವಾ ಕೈತಪ್ಪುತ್ತಲಿರುತ್ತದೆ. ಪ್ರಾಯಶಃ ಮಾನವನ ಜೀವನದ ಅತ್ಯಂತ ಮುಖ್ಯ ಘಟನೆ 'ಕರುಳ ಬಳ್ಳಿಯನ್ನು ಕತ್ತರಿಸುವುದು'. ಅದೇ ರೀತಿ, ಗಂಡು ಹುಡುಗನನ್ನು, 'ಹೆಂಗಸರ ಮನೆ'ಯಿಂದ ಬಲವಂತವಾಗಿ ಗಂಡಸರ ಜಗತ್ತಿಗೆ ತರಬೇಕೆಂದು ಸಂಸ್ಕೃತಿ, ಸಂಪ್ರದಾಯ ಮತ್ತು ಚರಿತ್ರೆ ಒತ್ತಿ ಒತ್ತಿ ಹೇಳಿದೆ. ನಮ್ಮ ಸಮಯ ಮತ್ತು ಸಂಸ್ಕೃತಿಯಲ್ಲಿ, ಹುಡುಗರ ಮೇಲೆ 'ಹೆಣ್ತನದ' ಪ್ರಭಾವ ಬಿದ್ದು ತೊಂದರೆಯಾಗುವುದನ್ನು ತಪ್ಪಿಸಲು ಶಾಲೆಗಳು ಈ ಪಾತ್ರವಹಿಸಿ, ಹುಡುಗರು, ಹುಡುಗಿಯರನ್ನು ಬೇರೆ ಬೇರೆ ಇಡುವ ಮರೆಮಾಡುವ ಕೆಲಸ ಮಾಡಿವೆ. ಮಕ್ಕಳು ಶಾಲೆಗೆ ಪ್ರವೇಶಿಸಿದಂತಯೇ ಈ ಪಾಠ ಆರಂಭ - ಹುಡುಗ ಎಂದರೆ ಹೆಣ್ತನಕ್ಕೆ ವಿರುದ್ಧ ಪದ ; ಗಂಡಸಾಗಬೇಕೆಂದರೆ ಹೆಣ್ತನದಿಂದ ಕಳಚಿಕೊಳ್ಳಬೇಕು, ಅವನು ಇದರಿಂದ ಎಷ್ಟೆಷ್ಟು ದೂರ ಹೋಗುತ್ತಾನೋ ಅದನ್ನವಲಂಬಿಸಿ ಅವನ ಯಶಸ್ಸನ್ನು ಗುರುತಿಸಲಾಗುತ್ತದೆ. ಪ್ರತ್ಯೇಕತೆಯೊಡನೆ ಇನ್ನೊಂದು ಮುಖ್ಯ ಪಾಠವೂ ಬರುತ್ತದೆ, ಶ್ರೇಷ್ಠತೆ ಮತ್ತು ಪ್ರಾಧಾನ್ಯತೆ. ಶಾಲೆಯಲ್ಲಿ ಕಲಿತ ಈ ವಿಚಾರಗಳು, ಪ್ರೀತಿಯ ಬದಲು ಅಧಿಕಾರ, ಸಮಾನತೆಯ ಬದಲು ಅಂತಸ್ತುಗಳ ಆಧಾರಿತ ಮೇಲಿರುವ ವ್ಯವಸ್ಥೆಯನ್ನು ಅರ್ಥ ಮಾಡಿಕೊಳ್ಳಲು ಹಾಗೂ ಅದನ್ನು ತನಗಾಗಿ ಬಳಸುವುದನ್ನು ಹುಡುಗರು ಕಲಿಯುತ್ತಾರೆ. ಲೈಂಗಿಕತೆ ಹಾಗೂ ಪುರುಷತ್ವದ ಬಗ್ಗೆ ಸ್ಪಷ್ಟ ವಿಚಾರಗಳು ಮಗುವಿನ ಬದುಕಿನಲ್ಲಿ ಅಚ್ಚೊತ್ತುವ ಅತ್ಯಂತ ಪ್ರಮುಖ ಹಂತ ಇದು. ಲಿಂಗ ಸಂವೇದನೆಯ ಬಗ್ಗೆ ಇನ್ನೂ ಸ್ಪಷ್ಟವಾಗಿ ಅರ್ಥವಾಗದಿರುವ, ಗೊಂದಲಗಳಲ್ಲಿರುವ ಹಾಗೂ ಅಧಿಕಾರ ಎಂದರೇನೆಂದು ಇನ್ನೂ ತಿಳಿಯದಿರುವ ಈ ಹಂತ ಬಹು ಮುಖ್ಯ. ಏಕೆಂದರೆ ಅಲ್ಲೊಂದು ಇಲ್ಲೊಂದು ಹೆಜ್ಜೆಗಳಿಂದ ಅವರು ಎಂತಹ ಮನುಷ್ಯರಾಗಬಹುದು ಎಂದು ಬದಲಿಸಬಹುದು. ಲಿಂಗಾಧಾರಿತ ಪಾತ್ರಗಳ ಬಗ್ಗೆ



*ಪ್ರಾಯಶಃ ಮಾನವನ ಜೀವನದ ಅತ್ಯಂತ ಮುಖ್ಯ ಘಟನೆ 'ಕರುಳ ಬಳ್ಳಿಯನ್ನು ಕತ್ತರಿಸುವುದು'. ಅದೇ ರೀತಿ, ಗಂಡು ಹುಡುಗನನ್ನು, 'ಹೆಂಗಸರ ಮನೆ'ಯಿಂದ ಬಲವಂತವಾಗಿ ಗಂಡಸರ ಜಗತ್ತಿಗೆ ತರಬೇಕೆಂದು ಸಂಸ್ಕೃತಿ, ಸಂಪ್ರದಾಯ ಮತ್ತು ಚರಿತ್ರೆ ಒತ್ತಿ ಒತ್ತಿ ಹೇಳಿದೆ.*

ಪ್ರಾಥಮಿಕ ಹಾಗೂ ಆರಂಭಿಕ ಪಾಠ ಮಾಡುವ ಸಾಮಾಜಿಕ ವ್ಯವಸ್ಥೆ ಕುಟುಂಬ. ಕೆಲಸಗಳಲ್ಲಿ ವಿಂಗಡನೆ, ಹಾಗೂ ಕುಟುಂಬದ ಸದಸ್ಯರ ನಡುವೆ ಸಂಬಂಧ ಹಾಗೂ ಪಾತ್ರಗಳನ್ನು ಕುಟುಂಬವು ನಿರ್ಧರಿಸುತ್ತದೆ. ಇದೆಲ್ಲಾ ನಡೆಯುವುದು, ಸಾಮಾಜಿಕ ಹಾಗೂ ಸಂಪ್ರದಾಯದಿಂದ ಮನ್ನಣೆ ಪಡೆದಿರುವ ವರ್ಗಶ್ರೇಣಿ ವ್ಯವಸ್ಥೆಯಲ್ಲಿ. ಈ ಶ್ರೇಣೀ ವ್ಯವಸ್ಥೆಯಾಗಿರುವುದು ವಯಸ್ಸು ಹಾಗೂ ಲಿಂಗಾಧಾರಿತವಾಗಿ. ಹಿರಿಯರಾಗಲಿ ಕಿರಿಯರಾಗಲೀ ಕುಟುಂಬದ ಸದಸ್ಯರ ಕೌಶಲ್ಯ, ಸಾಧನೆ ಮತ್ತು ವ್ಯಕ್ತಿಗತ ಸನ್ನಿವೇಶಗಳಿಗೆ ಯಾವುದೇ ಬೆಲೆಯಿಲ್ಲದ ಕೇವಲ ವಯಸ್ಸಿಗೆ ಮಾತ್ರ ಅರ್ಥವಿರುವ ಹಿರಿಯರು ಹಾಗೂ ಗಂಡಸರು ಎಂಬುದೊಂದೇ ಕಾರಣದಿಂದ ಅಧಿಕಾರ ಅವರ ವಶವಾಗಿರುತ್ತದೆ. ದಕ್ಷಿಣ ಏಷ್ಯಾದ ಅವಿಭಕ್ತ ಕುಟುಂಬಗಳಲ್ಲಿ ಗಂಡಸಾಗಿರುವುದು ಎಂದರೇನು ಹಾಗೂ ಅದರ ಅಧಿಕಾರವನ್ನು ಹೇಗೆ ಬಳಸಬೇಕು ಎಂಬ ಎಲ್ಲಾ ವಿಚಾರಗಳನ್ನು ಹುಡುಗರು ಬಹಳ ಬೇಗ ಕಲಿಯುತ್ತಾರೆ. ಗಂಡಸಿನ ಜೀವನದ ಇನ್ನೊಂದು ಪ್ರಮುಖ ಹಂತ ಲೈಂಗಿಕ ಪ್ರೌಢಾವಸ್ಥೆ ಹಾಗೂ ಅವನ ಲಿಂಗತ್ವದ ಮಾರ್ಪಾಡುಗಳಾಗುವುದು. ಅಧಿಕಾರ ಸಾಧಿಸುವುದು, ಆಕ್ರಮಣ ಮನೋಭಾವನೆಯಿಲ್ಲದೆ ಪುರುಷತ್ವಕ್ಕೆ ಅರ್ಥವಿಲ್ಲ ಎಂದೇ ಕೇಳಿ ಕೇಳೀ ಮೈಗೂಡಿಸಿಕೊಂಡಿರುವ, ಗಂಡಸ್ತನ ಸಾಧನೆ ಮಾಡಲು ಸದಾ ಪ್ರಚೋದನೆಯಲ್ಲೇ ಬೆಳೆದು ಬಂದಿರುವ ಗಂಡಸರಲ್ಲಿ ಲೈಂಗಿಕತೆಯ ಬಗ್ಗೆ ಆರೋಗ್ಯಕರ ಭಾವನೆ ಇರುವುದೆಂದು ಹೇಗೆ ತಾನೆ ಭಾವಿಸುವುದು. ಲೈಂಗಿಕ ಸಾಮರ್ಥ್ಯ ಮತ್ತು ಅದಕ್ಕಿಂತಲೂ ಸಂಭೋಗ ಪರಾಕ್ರಮಗಳು ಪುರುಷತ್ವದ ಮುಖ್ಯ ವಿಚಾರಗಳಾಗುತ್ತವೆ. ಜೊತೆಗೆ, ಒಬ್ಬ ಗಂಡಸನ್ನು ಗಂಡಸೆನ್ನಲು ಇದೇ ಮಾಪಕವಾಗಿ, ಗಂಡಸ್ತನದ ಬಲ, ಅಧಿಕಾರ, ಶಕ್ತಿಗಳನ್ನು ತೋರ್ಪಡಿಸಲು ಲೈಂಗಿಕ ಸಂಭೋಗ ಇನ್ನೊಂದು ಸಾಧನವಾಗುತ್ತದೆ. ಮನುಷ್ಯನ ಜೀವನದಲ್ಲಿ ಅತ್ಯಂತ ಕಷ್ಟಕರವಾದ ಹಂತ ಮುಪ್ಪು. ಸದಾ ಹೊರಗಿರುವ, ಜನಜಂಗುಳಿಯಲ್ಲಿರುವ, ತಮ್ಮ ಹಾಗೂ ಇತರರ ಜೀವನವನ್ನು ನಿಯಂತ್ರಿಸುತ್ತಿದ್ದ ಹಂತದಿಂದ ಹಿಂಜರಿದು ಗಂಡಸರು ಮನೆ ಸೇರುವರು. ಬಾಲ್ಯದಿಂದಲೂ ಸಹ ಮನೆಯ ಹೊರಗಿನ ಜಗತ್ತಿನಲ್ಲಿದ್ದು, ಅಲ್ಲಿ ಹೇಗಿರಬೇಕೆಂದು ಕಲಿತಿದ್ದ ಗಂಡಸರಿಗೆ ಮನೆಯೊಳಗಿನ ಜಗತ್ತು ಹೇಗಿರುತ್ತದೆ, ಇಲ್ಲಿಗೆ ಬೇಕಾದ ಕೌಶಲ್ಯಗಳಾವುವು ಎಂದು ತಿಳಿದಿರುವುದಿಲ್ಲ. ಈ ಬದಲಾವಣೆಗೆ ಗಂಡಸರು ಹೊಂದಿಕೊಳ್ಳುವುದಾದರೂ ಹೇಗೆ? 'ನಿವೃತ್ತಿ'ಗೆ ಹೊಂದಿಕೊಳ್ಳಲಾಗದ ಗಂಡಸರಿಗೇನಾಗುತ್ತದೆ? ತಮ್ಮ ಜೀವನದಲ್ಲಿ ಈಗೇನು ಮುಖ್ಯ ಎಂದು ಅವರಿಂದೇಕೆ ಗುರುತಿಸಿಕೊಳ್ಳಲಾಗದು? ವಯಸ್ಸಾಗುತ್ತಿರುವ ಗಂಡಸರು, ತಮ್ಮ ಜೀವನದ ಬಹುಪಾಲು ಸಾಧಿಸಿದ ಪಾತ್ರ ಮುಗಿದು ಹೋಯ್ತು ಎಂದಾಗ ಅನುಭವಿಸುವ ನೋವು, ಮಾನಸಿಕ ವ್ಯಾಕುಲದ ಬಗ್ಗೆ ಎಷ್ಟು ಹೇಳಿದರೂ ಕಡಿಮೆಯೇ.



**ಪರ್ಯಾಯಗಳು**

ತಕ್ಷಣವೇ ಗಮನ ಹರಿಸಬೇಕಾದ ವಿಚಾರಗಳಾದ ಲೈಂಗಿಕತೆಯನ್ನೇ ಕೇಂದ್ರೀಯವಾಗಿಟ್ಟುಕೊಂಡು ಮಹಿಳೆಯರ ಮೇಲೆ ನಡೆಯುವ ಹಿಂಸೆ, ನೇರವಾಗಿ ಅಥವಾ ಪರೋಕ್ಷವಾಗಿ ಆಗುವ ದುರ್ಬಳಕೆ ಇತ್ಯಾದಿಗಳನ್ನು ತಡೆಯಲಿರುವ ಈಗಿರುವ ವಿಧಾನಗಳು ಅಂತಹ ಪರಿಣಾಮಕಾರಿಯಾಗಿಯೇನಿಲ್ಲ. ಇದು ಯಾಕೆಂದರೆ, ಹುಡುಗರು ಮತ್ತು ಹುಡುಗಿಯರು ಎಂತಹ ವಾತಾವರಣದಲ್ಲಿ ಬೆಳೆದಿದ್ದಾರೆ, ಲಿಂಗ ಸಂವೇದನೆಯ ಯಾವುದೇ ವಿಚಾರಗಳು ಅವರ ಮೇಲೆ ಯಾವುದೇ ಪ್ರಭಾವ ಬೀರುವುದಿಲ್ಲ. ಯುವ ಜನರೊಡನೆ ಕೆಲಸ ಮಾಡುತ್ತಿರುವ ಅನೇಕರಿಗೆ ಈ ಸಮಸ್ಯೆ ಬಾಧಿಸುತ್ತಿದೆ. ಈ ದಿಶೆಯಲ್ಲಿ ಸಂವೇದನಾತ್ಮಕ ಅಭಿವ್ಯಕ್ತಿ ಕಾರ್ಯಕ್ರಮಗಳಲ್ಲಿ ಒಂದಷ್ಟು ಯಶಸ್ಸು ಕಂಡಿರುವುದು ಮನಸ್ಸಿಗೊಂದು ಕಿಟಕಿಯಿಡುವ ವಿಧಾನದಲ್ಲಿ. ಶಾಲೆ, ಸಮಾಜ, ಕುಟುಂಬ ಇತ್ಯಾದಿ ವ್ಯವಸ್ಥೆಗಳಲ್ಲಿ ಸಂಬಂಧಗಳು, ಪಾತ್ರಗಳು, ಲಿಂಗಾಧಾರಿತ ಪುರುಷಪ್ರಧಾನತೆ, ಪೂರ್ವಾಗ್ರಹಗಳು ಇತ್ಯಾದಿಗಳನ್ನು ಕುರಿತು ಈ ವಿಧಾನದಲ್ಲಿ ಚರ್ಚೆ ಆರಂಭಿಸಿ (ಕಿಟಕಿಗಳನ್ನಿಟ್ಟು) ಅಲ್ಲಿಂದ ಪರಸ್ಪರ ಆಕರ್ಶಣೆಗಳು, ಸಂಘರ್ಷ, ದುರುಪಯೋಗ ಮತ್ತು ಹಿಂಸೆ, ಎಚ್.ಐ.ವಿ/ಏಡ್ಸ್, ಮುಂತಾದುವುಗಳ ಕಡೆ ಸಾಗುವುದು. ಈ ವಿಚಾರವನ್ನು ದಕ್ಷಿಣೇಷ್ಯಾದಲ್ಲಿ ಪುರುಷತ್ವ ಕುರಿತು ಚಲನಚಿತ್ರ ತಯ್ಯಾರಿ ಯೋಜನ ಕಾರ್ಯಗಾರದಲ್ಲಿ ಚರ್ಚಿಸಲಾಯಿತು. ಅಲ್ಲಿದ್ದ ಮುಖ್ಯ ಸೂಚಿ ಪುರುಷತ್ವದ ಬಗ್ಗೆ ಅನುಭವಗಳು ಹಾಗೂ ಪ್ರಕ್ರಿಯೆಗಳ ಬಗ್ಗೆ ಬೆಳಕು ಚೆಲ್ಲುವುದಾದರೆ, ಯುವ ಜನರ ನಡುವೆ ಈ ಸಮಸ್ಯೆಯ ಬಗ್ಗೆ ವಿಚಾರ ವಿನಿಮಯವೇ ಮೊದಲಾದುವುಗಳಿಗೆ ಒಂದು ಒಳ್ಳೆಯ ವೇದಿಕೆಯನ್ನು ಸೃಷ್ಟಿಸಬಹುದು ಎಂಬುದಾಗಿತ್ತು. ಹಲವಾರು ದೇಶಗಳಲ್ಲಿ ಸಾಮಾನ್ಯವಾಗಿ ಕಾಣುವ ಮತ್ತು ಚಾಲ್ತಿಯಲ್ಲಿರುವ ಹಾಗೂ ವಿಶೇಷವೆನಿಸುವಂತಹ ಪುರುಷತ್ವದ ವಿಚಾರಗಳ ಮೇಲೆ ಕೇಂದ್ರೀಕರಿಸುವ ಪ್ರಯತ್ನ ನಡೆಯಿತು. ಇದು ಆಧಾರವಾಗಿಟ್ಟುಕೊಂಡದ್ದು ನಿರ್ದಿಷ್ಟ ಲಿಂಗಿಗಳಾಗಿ ಜನರಿಗಾಗಿರುವ ವೈಯಕ್ತಿಕ ಅನುಭವಗಳು, ಕಾರಣಗಳು, ಬಯಲುಗೊಳಿಸುವ ವಿಚಾರಗಳು ಮತ್ತು ಇವುಗಳ ಸುತ್ತ

ನಡೆಯುವ ಚರ್ಚೆ. ಲಿಂಗ ಸಂಬಂಧಿತ ಮುಖ್ಯ ವಿಚಾರಗಳ ಬಗ್ಗೆ ಗಂಡಸರೊಡನೆ ವ್ಯವಹರಿಸುವ ಸಂಸ್ಕೃತಿಯೇ ಇಲ್ಲದ ಕಾರಣ, ಸಮುದಾಯದ ಅನೇಕ ವಿಚಾರಗಳನ್ನು ಕುರಿತು ಹೆಂಗಸರೊಡನೆಯೇ ವ್ಯವಹರಿಸಬೇಕಾದಂಥ ವಿಚಾರಾಸಂದಿಗ್ಧ ಪರಿಸ್ಥಿತಿಯನ್ನು ಸೃಷ್ಟಿಸಿದೆ. ಸಮುದಾಯವನ್ನು ಕುರಿತಾದ ನಿರ್ಧಾರಗಳನ್ನು ಕೈಗೊಳ್ಳುವ ಪ್ರಕ್ರಿಯೆಯಲ್ಲಿ ಹೆಂಗಸರು ಭಾಗವಹಿಸಬೇಕೆಂದು ಪ್ರಯತ್ನಗಳು ಹಾಗೂ ಇಲ್ಲಿ ಪುರುಷ ಪ್ರಧಾನ ದಬ್ಬಾಳಿಕೆಯನ್ನು ಎದುರಿಸಲು ಹೊರಟದ್ದು, ಹೆಂಗಸರೇ ಸಮುದಾಯದ ಎಲ್ಲ ಸಮಸ್ಯೆ, ವಿಚಾರಗಳಿಗೆ ತಲೆಕೊಡಲಿ, ಬದಲಾವಣೆ ತರಲಿ ಎಂಬಂತೆ ಗಂಡಸರು ಎಲ್ಲ ಜವಾಬ್ದಾರಿಗಳನ್ನು ಹೆಂಗಸರಿಗೆ ಕಟ್ಟಿ ತಾವು ನುಣಚಿಕೊಳ್ಳುವಂತಾಗಿದೆ. ಜನಸಂಖ್ಯೆ ತಡೆ, ಎಚ್.ಐ.ವಿ./ಏಡ್ಸ್, ಸಾಕ್ಷರತೆ, ಪರಿಸರವೇ ಮೊದಲಾದವುಗಳಿಗೆ ಹೆಂಗಸರನ್ನೇ ಗುರಿಯಾಗಿಸುವುದರಿಂದ ಹಾಗೂ ಗಂಡಸರನ್ನು ಸಮರ್ಪಕವಾಗಿ ಒಳಗೊಳ್ಳದೇ ಇರುವುದರಿಂದ ಈ ಯಾವುದೇ ವಿಚಾರ/ಸಮಸ್ಯೆಗಳನ್ನು ಸಮರ್ಪಕವಾಗಿ ಎದುರಿಸಲಾಗದು. ಗಂಡಸರನ್ನು ಲಿಂಗಿಗಳಾಗಿ ನೋಡಿ ಅಧ್ಯಯನಮಾಡಿ ಅವರೊಡನೆ ಕೆಲಸ ಮಾಡುವ ಅಗತ್ಯವಿದೆ.

*ಜನಸಂಖ್ಯೆ ತಡೆ, ಎಚ್.ಐ.ವಿ./ಏಡ್ಸ್, ಸಾಕ್ಷರತೆ, ಪರಿಸರವೇ ಮೊದಲಾದವುಗಳಿಗೆ ಹೆಗಸರನ್ನೇ ಗುರಿಯಾಗಿಸುವುದರಿಂದ ಹಾಗೂ ಗಂಡಸರನ್ನು ಸಮರ್ಪಕವಾಗಿ ಒಳಗೊಳ್ಳದೇ ಇರುವುದರಿಂದ ಈ ಯಾವುದೇ ವಿಚಾರ/ ಸಮಸ್ಯೆಗಳನ್ನು ಸಮರ್ಪಕವಾಗಿ ಎದುರಿಸಲಾಗದು.*

**ಆಕರಗಳು :**


1. ರಾಯ್ ರಾಹುಲ್, Background paper to the workshop on South Asian Masculinities film project.

2. ಕುಮಾರ್ ಕೃಷ್ಣ What is Worth Teaching, Growing up Male pp-86-94

3. UNICEF, Report Draft of Regional Core Group Planning Meeting-Partnership with Men and Boys to Increase Gender Equality in South Asia.





*ಡಾ. ಶೇಖರ್ ಶೇಷಾದ್ರಿಯವರು, ಬೆಂಗಳೂರಿನ ನಿಮ್ಹಾನ್ಸ್‌ನ ಮಕ್ಕಳು ಹಾಗೂ ಹದಿಹರೆಯದವರಿಗೆ ನೀಡುವ ಸೇವೆಗಳ ವಿಭಾಗದಲ್ಲಿ ಪ್ರಾಧ್ಯಾಪಕರಾಗಿದ್ದಾರೆ. ಮುಖ್ಯವಾಗಿ ಮಕ್ಕಳು ಹಾಗೂ ಹದಿಹರೆಯದವರ ಮಾನಸಿಕ ಆರೋಗ್ಯ ವಿಚಾರಗಳಲ್ಲದೆ ಅವರು, ಲಿಂಗಸಂವೇದನೆ, ಲೈಂಗಿಕತೆ, ಹಿಂಸೆ, ಹಾಗೂ ದುರುಪಯೋಗ, ಸಂಕಷ್ಟದಲ್ಲಿರುವ ಮಕ್ಕಳು, ತಪ್ಪುಮಾಡಿದ ಮಕ್ಕಳು, ಅನುಭಾವಿಕ ವಿಧಾನಗಳು ಹಾಗೂ ಗುಣಾತ್ಮಕ ಸಂಶೋಧನೆ ರಂಗಗಳಲ್ಲಿ ಕೆಲಸ ಮಾಡುತ್ತಿದ್ದಾರೆ.*

**ಅನುವಾದ : ವಾಸುದೇವ ಶರ್ಮಾ**

# HIV ತಡೆಯುವಲ್ಲಿ ಬದಲಾಗುತ್ತಿರುವ ದೃಷ್ಟಿಕೋನಗಳು - ಗಂಡಸರ ಜವಾಬ್ದಾರಿಗಳು

- ಸಂಘಮಿತ್ರ ಅಯ್ಯಂಗಾರ್




HIV / ಏಯ್ಡ್ಸ್ ಸೋಂಕು ಇನ್ನೂ ಹತ್ತು ವರಷವಾದರೂ ಇಲ್ಲಿಂದ ಕಾಲ್ತೆಗೆಯುವುದಿಲ್ಲ. ಅದು ಎಲ್ಲಿಲ್ಲಿ ಹೆಜ್ಜೆಯೂರುತ್ತದೋ ಅಲ್ಲೆಲ್ಲ ವ್ಯಕ್ತಿಗಳನ್ನು, ಕುಟುಂಬಗಳನ್ನು ಮತ್ತು ಸಮುದಾಯಗಳನ್ನೆ ಕಬಳಿಸುತ್ತದೆ. ಇವತ್ತು ಭಾರತದಲ್ಲಿ ಹತ್ತಿರ ಹತ್ತಿರ 37 ಲಕ್ಷ ಜನ ಈ ಸೋಂಕಿಗೆ ಈಡಾಗಿದ್ದಾರೆ. ಹಾಗಿದ್ದರೂ ಯುದ್ಧೋಪಾದಿಯಲ್ಲಿ ಸೆಣೆಸಿ ಇದನ್ನು ಹೊಡೆದೋಡಿಸಲು ನಾವು ಇನ್ನೂ ಸಜ್ಜಾಗಿಲ್ಲ. ಈಗ ಈ ಸಮಸ್ಯೆ ಕೇವಲ ಆರೋಗ್ಯ ವಲಯದ, ಇಲ್ಲವೆ ಸರ್ಕಾರದ, ಇಲ್ಲವೇ ಸರ್ಕಾರೇತರ ಸಂಸ್ಥೆಗಳ ಸಮಸ್ಯೆಯಾಗಿ ಮಾತ್ರ ಉಳಿದಿಲ್ಲ. ಇದು ಈಗ ನಮ್ಮೆಲ್ಲರ ಸಮಸ್ಯೆ, ನಮ್ಮಲ್ಲಿ ಪ್ರತಿಯೊಬ್ಬರ ಸಮಸ್ಯೆ. ಕಳೆದ ಒಂದೂವರೆ ದಶಕದಿಂದಲೂ ಭಾರತದಲ್ಲಿ HIV ತಡೆಯುವ ಕೆಲಸವನ್ನು ಈ ಸಾಂಕ್ರಾಮಿಕ್ಕೆ ಪ್ರಾರಂಭದ ಹಂತದಲ್ಲೆ ಅತಿ ಸುಲಭವಾಗಿ ಈಡಾಗುತ್ತಾರೆಂದು ಪರಿಗಣಿಸಲಾದ ಲೈಂಗಿಕ ಕಸುಬುಗಾರ್ತಿಯಂಥವರನ್ನು ಮತ್ತು ಅವರ ಪುರುಷ ಸಂಗಾತಿಗಳನ್ನು ಕೇಂದ್ರವಾಗಿಟ್ಟುಕೊಂಡು ನಡೆಸಲಾಗುತ್ತಿದೆ. ಈ ಸಾಂಕ್ರಾಮಿಕ ಭಾರತಕ್ಕೆ ಕಾಲಿಟ್ಟು 14 ವರ್ಷಗಳೇ ಸಂದಿದ್ದು, ಅದು ಕಟ್ಟು ಹರಿದು ಹಬ್ಬುತ್ತಿದ್ದರೂ ನಮ್ಮ ಎಲ್ಲ ಪ್ರಯತ್ನಗಳೂ ಈ ಗುಂಪುಗಳಿಗೆ ಮಾತ್ರ ಸೀಮಿತವಾಗಿ ಉಳಿದಿವೆ, ಭೌಗೋಳಿಕ ಮತ್ತು ವೃತ್ತ್ಯಾತ್ಮಕ ಹಾಗೂ ಜಾತಿ / ವರ್ಗಗಳೆಂಬ ಎಲ್ಲೆಕಟ್ಟುಗಳನ್ನು ಕಿತ್ತೊಗೆದು ಈ ಸಾಂಕ್ರಾಮಿಕ ದೃತ್ಯಗಾತ್ರದಲ್ಲಿ ದಾಪುಗಾಲಿಡುತ್ತಿದೆ.

ಲೈಂಗಿಕ ವಿಷಯಕ್ಕೆ ನಾವು ಮುಚ್ಚು ಮರೆ ಮಾಡುವುದಿಲ್ಲವೆಂದು ಇತಿಹಾಸ ಪ್ರಸಿದ್ಧಿಯೇನೋ ಇದೆ. ಆದರೆ, ಕಳೆದ ಕೆಲವು ಶತಮಾನಗಳಿಂದೀಚೆಗೆ ನಮ್ಮನ್ನು ಬಿಗಿದಿಟ್ಟ ಮಧ್ಯಮ ವರ್ಗದ ನೈತಿಕತೆಯ ಸರಪಳಿಯಲ್ಲೆ ನಾವು ಬಂದಿಗಳಾಗಿದ್ದೇವೆ. ಈ ರಾಷ್ಟ್ರದ ಲೈಂಗಿಕ ವರ್ತನೆ ಕುರಿತಾದ ಮಾಹಿತಿ ಸಾರ್ವಜನಿಕ ರಂಗದಲ್ಲಿ ತೋರಿಬರುತ್ತಿಲ್ಲ. ಹಾಗಾಗಿ HIV ತಡೆಯುವುದಕ್ಕೆ ಹಲವಾರು ದೋಷಪೂರಿತ ಗ್ರಹಿಕೆಗಳನ್ನೆ ಮುಂದಿಟ್ಟುಕೊಂಡು ಪ್ರಯತ್ನಿಸಲಾಗುತ್ತಿದೆ. ಇಂಥವುಗಳಲ್ಲಿ ಎರಡು ಗಂಭೀರ ತಪ್ಪುಗಳೆಂದರೆ ವಿವಾಹಬಾಹಿರ ಮೈಥುನ ವೇಶ್ಯಾವಾಟಿಕೆಗಳಲ್ಲಿ ಮಾತ್ರ ನಡೆಯುತ್ತದೆ ಮತ್ತು ಕೆಲವು ನಿರ್ದಿಷ್ಟ ಗುಂಪಿನ ಗಂಡಸರು ಮಾತ್ರ ಹಣ ನೀಡಿ ಹೆಣ್ಣಿನ ಸಂಗ ಮಾಡುತ್ತಾರೆ ಎಂಬುದು ಇನ್ನೊಂದು. ತಪ್ಪೆಂದರೆ ಈ ಎರಡು ಅಂಶಗಳ ಮೇಲೆ ಗಮನ ಕೇಂದ್ರಿಕರಿಸಿ ಪ್ರಯತ್ನ ನಡೆಸಿದ್ದೇ ಆದರೆ ಈ ಸಾಂಕ್ರಾಮಿಕ ರೋಗ ಹಬ್ಬುವುದನ್ನು ತಡೆಗಟ್ಟಲು ಸಾಧ್ಯ ಎಂಬುದು. ಆದರೆ ಹಬ್ಬಿಯೇ ಹಬ್ಬುತ್ತಿರುವ ಈ ಸಾಂಕ್ರಾಮಿಕ ವಿವೇಚನೆಯನ್ನು ತೂರೆದು ಕುಳಿತಿರುವ ನಮ್ಮ ನೆಮ್ಮದಿಯ ಗುಳ್ಳೆಗೆ ಮುಳ್ಳು ಚುಚ್ಚಿದೆ ಮತ್ತು 'ಪತಿತ ಪಶ್ಚಿಮ' ದಷ್ಟೆ ನಾವೂ ಲೈಂಗಿಕವಾಗಿ ಸ್ವಚ್ಛಂದರೆಂಬುದನ್ನು ತೆರೆದಿಟ್ಟು ತೋರಿಸಿದೆ. ಹಳ್ಳಿಹಳ್ಳಿಗಳಲ್ಲಿ ಮತ್ತು ಪಟ್ಟಣಗಳಲ್ಲಿ ಮೈಮಾರಿಕೊಳ್ಳುವವರು ಇರುವುದನ್ನು ಮತ್ತು ಅವರನ್ನು ಹುಡುಕಿಕೊಂಡು ಎಲ್ಲ ವೃತ್ತಿಗೆ ಸೇರಿದ ಜನ ಬರುವುದನ್ನು ರೋಗ ನಿರೋದಕ ಕಾರ್ಯಕ್ರಮಗಳು ಬಹಿರಂಗಗೊಳಿಸಿವೆ. ಇದೇ ಅಲ್ಲದೆ ಆಕಸ್ಮಿಕವೆಂಬಂತೆ ಲೈಂಗಿಕವಾಗಿ ಬೆರೆಯುವುದು ಇನ್ನೂ ಹೆಚ್ಚು ವ್ಯಾಪಕವಾಗಿ ನಡೆಯುತ್ತದೆ. ಎಲ್ಲ ಸಾಮಾಜಿಕ ಆರ್ಥಿಕ ಗುಂಪುಗಳಿಗೆ ಸೇರಿದ ವ್ಯಕ್ತಿಗಳು ಲೈಂಗಿಕವಾಗಿ ವರ್ಗಾಯಿಸಲ್ಪಟ್ಟು HIV ಸೋಂಕಿಗೆ ಈಡಾಗುತ್ತಿದ್ದಾರೆ. ಸೋಂಕಿನ ಸರಪಳಿ ಬೆಳೆಯದಂತೆ ಅದರ ಮೊದಲ ಕೊಂಡಿ ಯಾರೋ ಅವರಲ್ಲೆ ಸೋಂಕನ್ನು ತಡೆಗಟ್ಟಿ ನಿಲ್ಲಿಸುವ ತಂತ್ರಗಳು ಸೋತು ಹೋಗಿವೆ ; ಬಹುಜನ ಸಂಗಾತಿಗಳೊಂದಿಗೆ ಲೈಂಗಿಕ ಕ್ರಿಯೆ ನಡೆಸುವವರು ಎಲ್ಲೆಲ್ಲೂ ಇದ್ದೇ ಇರುವ ಕಟು ಸತ್ಯವನ್ನು ಒಪ್ಪಿಕೊಳ್ಳಲು ನಾವು ನಿರಾಕರಿಸುತ್ತಿರುವುದೇ ಅದಕ್ಕೆ ಕಾರಣ. ಇನ್ನು HIV ತಡೆಗಟ್ಟಲು ನಡೆಯುತ್ತಿರುವ ಪ್ರಯತ್ನಗಳತ್ತ ನೋಡೋಣ. ''ನಿರ್ದಿಷ್ಟ ಜನರನ್ನು ಗುರಿಯಾಗಿಟ್ಟುಕೊಂಡು ಪ್ರಯತ್ನಗಳನ್ನು ನಡೆಸುವುದನ್ನೆ'' ಈಗಲೂ ನಾವು ರಾಷ್ಟ್ರ ಮಟ್ಟದಲ್ಲಿ ಶಿಫಾರಿಸು ಮಾಡುತ್ತಿದ್ದೇವೆ. ಇವು ಸಫನವಾಗಿ,

ಗಮನ ಕೇಂದ್ರೀಕರಿಸಿ ಮತ್ತು ಒಂದು ರಚನೆಯನ್ನನುಸರಿಸಿ ನಡೆಯುವ ಕ್ರಮವಾಗಿದ್ದು ಮುಪ್ಪುಗಿಗೊಂಡು ನಡೆಯುತ್ತದೆ, ಅದೆಂದರೆ : ನಡವಳಿಕೆಯನ್ನು ತಿದ್ದುವ ತಿಳಿವಳಿಕೆ ನೀಡುವುದು, ಲೈಂಗಿಕವಾಗಿ ವರ್ಗಾಯಿಸಲ್ಪಡುವ ಸೋಂಕುಗಳಿಗೆ ಚಿಕಿತ್ಸೆಗೆ ಅವಕಾಶ ಕಲ್ಪಿಸುವುದು ಮತ್ತು ನಿರೋಧ್‌ನಂಥ ಕಾಂಡೋಮ್ (ಶಿಶ್ನಕವಚ)ಗಳ ಬಳಕೆಯನ್ನು ದೃಢವಾಗಿ ಜಾರಿಗೊಳಿಸುವುದು. ಇದರಲ್ಲಿ ಬೆಲೆವೆಣ್ಣುಗಳು, ಟ್ರಕ್ ಚಾಲಕರು ಮತ್ತು ಅವರ ಸಹಾಯಕರು, ಬೀದಿ ಮಕ್ಕಳು ಮತ್ತು ವಲಸಿಗ ಕೆಲಸಗಾರರು ಇವರನ್ನೆ ಈಗಲೂ ಹೆಚ್ಚಾಗಿ ಗುರಿಯಾಗಿಟ್ಟುಕೊಳ್ಳಲಾಗುತ್ತಿದೆ. ಟ್ರಕ್ ಚಾಲಕರು ಮತ್ತು ಅವರ ಸಹಾಯಕರನ್ನು ಮತ್ತು ಸ್ವಲ್ಪ ಮಟ್ಟಿಗೆ ವಲಸಿಗ ಕೆಲಸಗಾರರನ್ನು ಬಿಟ್ಟರೆ ಮಿಕ್ಕಂತೆ ಈ ತಡೆಗಟ್ಟುವ ಕಾರ್ಯಕ್ರಮಕ್ಕೆ ಒಳಪಟ್ಟ ಪ್ರಜಾಸಂಖ್ಯೆಗೆ ಇನ್ನೂ ಸ್ವಂತ ಬಲವೆಂಬುದಿಲ್ಲ. ಅವರಿಗೆ ಸ್ವರಕ್ಷಣೆಯಾಗುವಂತೆ ಸಬಲೀಕರಿಸುವ ಪ್ರಕ್ರಿಯೆ ಸಾಕಷ್ಟು ಶೀಘ್ರವಾಗಿ ನಡೆಯಬೇಕಲ್ಲವೆ ಎಂಬ ಪ್ರಶ್ನೆ ಇನ್ನೂ ಪ್ರಶ್ನೆಯಾಗಿಯೇ ಉಳಿದಿದೆ.

ಮುಂದುವರಿದು ನೋಡಿದಾಗ, ಬಹು ಜನ ಲೆಂಗಿಕ ಸಂಗಾತಿಗಳಿರುವವರಿಗೆ ಸೋಂಕಿನ ಸಾಧ್ಯತೆ ಇದೆ ಎಂದು ಒತ್ತಿ ಹೇಳುತ್ತಿರುವ ನಾವು, ಈ ಸೋಂಕು ಈಗಾಗಲೇ ಮೇರೆವರಿದು ಹರಡಿದೆ ಎಂಬುದನ್ನು ಪರಿಗಣಿಸಿಯೇ ಇಲ್ಲ. ಕರ್ನಾಟಕದಲ್ಲಿ ಪ್ರಸೂತಿಪೂರ್ವ ಚಿಕಿತ್ಸಾಲಯಗಳ HIV ನಿಗಾವಣೆ ಮಾಹಿತಿ ತೋರಿಸಿರುವಂತೆ ಜನಸಾಮಾನ್ಯರಲ್ಲಿ ಹೆಂಗಸರ ಜನಸಂಖ್ಯೆಯ ಶೇ.7 ಪ್ರಮಾಣದಲ್ಲಿ ಈ ಸೋಂಕು ಇದೆ. ಇವರಲ್ಲಿ ಹೆಚ್ಚಿನವರು ಗಂಡನನ್ನು ಮಾತ್ರ ಲೈಂಗಿಕ ಸಂಗಾತಿಯಾಗಿ ಹೊಂದಿರುವವರು. ಆದರೆ ಈ ಹೆಂಗಸರ ದೈಹಿಕ, ಸಾಮಾಜಿಕ- ಆರ್ಥಿಕ ಮತ್ತು ಲೈಂಗಿಕ ಸಂಬಂಧದ ದೌರ್ಬಲ್ಯಗಳಿಂದಾಗಿ ಶೇಕಡವಾರು ಅಂಕಿ ಒಂದಕ್ಕೆರಡಾಗಿ ಎರಡಕ್ಕೆ ನಾಲ್ಕಾಗಿ ಏರುವ ಸಂಭವವಿದೆ. ಈಗ ಇರುವ ತಂತ್ರಗಳು ಈ ಹೆಂಗಸರ ರಕ್ಷಣೆಗೆ ಏನೇನೂ ಸಾಲುತ್ತಿಲ್ಲ. ಸ್ತ್ರೀಯರ ಚಳವಳಿಗಳೂ ಸೇರಿದಂತೆ ಮುಖ್ಯವಾಹಿನಿಯ ಚಳವಳಿಗಳು ತಮ್ಮ ಪರಿಧಿಯಲ್ಲಿರುವ ಬಹು ಸಂಖ್ಯೆಯ ಜನರಿಗೆ ಈ ದೌರ್ಬಲ್ಯಗಳಿರುವುದನ್ನು ಮತ್ತು ಅವರು ಅಪಾಯಕ್ಕೆ ಎರವಾಗುವುದನ್ನು ಮನಸ್ಸಿಗೆ ತಂದುಕೊಂಡಿಲ್ಲ.

ಅಭಿವೃದ್ಧಿಗಾಗಿ ಕೆಲಸ ಮಾಡುತ್ತಿರುವ ಸಂಘಟನೆಗಳು ಈ ಅಪಾಯವನ್ನು ಮನಗಂಡಿದ್ದರೂ HIV /ಏಯ್ಡ್ಸ್ ಕುರಿತ ತಮ್ಮ ತಂತ್ರಗಳನ್ನು ತಿದ್ದಿ ಪುನರೂಪಿಸಿಕೊಂಡಿಲ್ಲ. ಆರ್ಥಿಕ ಮತ್ತು ರಾಜಕೀಯ ಸಬಲೀಕರಣ ಪ್ರಕ್ರಿಯೆಗಳೇ ಬೇರೆ ಲೈಂಗಿಕ ಸಬಲೀಕರಣ ತಾನೇ ಬೇರೆ. ಹೆಂಗಸರಿಗೆ ಲೈಂಗಿಕ ಸುರಕ್ಷತೆ ಲಭಿಸುವಂತಾಗಲು ಅವರೊಂದಿಗೆ ಕೂಡಿ ಪ್ರಯತ್ನಿಸಬೇಕಾದರೆ, ಪ್ರಾಕೃತಿಕ ಸಂಪನ್ಮೂಲ ನಿರ್ವಹಣೆ ಅಥವಾ ಸಣ್ಣ ಪುಟ್ಟ ಸಾಲಗಳ ಮೂಲಕ ಹೆಂಗಸರ ಸಬಲೀಕರಣ ಮಾಡುವ ಸಾಮೂಹಿಕ ಬಲ ಆಧರಿಸಿದ ಪ್ರಯತ್ನಗಳಿಗಿಂತ ತೀರಾ ಭಿನ್ನವಾದ ಪ್ರಯತ್ನ ನಡೆಸಬೇಕಾಗುತ್ತದೆ. ಎರಡನೆಯದರಲ್ಲಿ ಹೆಂಗಸರು ಗಂಡಸರ ಆಧಿಪತ್ಯದಲ್ಲೆ ಇದ್ದ ರಂಗಗಳಿಂದ ಹೊರಬಂದು ತಮ್ಮಿಂದ ತಾವೇ ಒಂದು ಸ್ಥಾನ ಕಲ್ಪಿಸಿಕೊಳ್ಳಬಲ್ಲರು. ಆರ್ಥಿಕ ಮತ್ತು ರಾಜಕೀಯ ಸಬಲೀಕರಣದಿಂದ ಬರುವ ಲಾಭಗಳು ವರ್ಗ ಮತ್ತು ಜಾತಿಗಳಿಗೆ ಸಂಬಂಧಿಸಿದ್ದು ವ್ಯಾಪಕವಾಗಿರುತ್ತವೆ ಮತ್ತು ಅವು ದಕ್ಕುವುದು ಗಂಡಸರಿಗೆ ಮತ್ತು ಸಮುದಾಯಕ್ಕೆ ; ಲೈಂಗಿಕ ಸಬಲೀಕರಣದ ಮಾತು ಬೇರೆ, ಅದು ಬಂದಾಗ ಗಂಡಸರಿಗೆ ಅವರವರ ಸ್ವಂತದ ವಿಷಯಕ್ಕೆ ವ್ಯಕ್ತಿಗತ ಮಟ್ಟದಲ್ಲಿ ಸವಾಲು ಎಸೆದಂತೆ ಕಾಣುತ್ತದೆ.

ಭೌಗೋಳಿಕ, ವೃತ್ತ್ಯಾತ್ಮಕ ಮತ್ತು ವರ್ಗ/ಜಾತಿಗಳ ಎಲ್ಲೆಗಳನ್ನು ದಾಟಿಕೊಂಡು ಎಲ್ಲ ಹೆಂಗಸರಿಗೂ ನಮ್ಮ ಪ್ರಯತ್ನಗಳ ಫಲ ತಲುಪಿಸಬೇಕಾದರೆ ಅದಕ್ಕೆ ಅಗಾಧ ಪ್ರಮಾಣದ ಪ್ರಯತ್ನವೇ ನಡೆಯಬೇಕು. ಭಾರತೀಯ ಹೆಂಗಸರು ಲೈಂಗಿಕವಾಗಿ ಸ್ವರಕ್ಷಣೆ ಮಾಡಿಕೊಳ್ಳುವಂತೆ ಅವರನ್ನು ಸಂಘಟಿಸಿ ಮತ್ತು ಸಬಲೀಕರಿಸುವುದಕ್ಕೆ ಸುದೀರ್ಘ ಕಾಲ ಹಿಡಿಸುತ್ತದೆ. ಅಷ್ಟರೊಳಗೆ HIV ತನ್ನ ಬಲಿ ತೆಗೆದುಕೊಂಡಿರುತ್ತದೆ. ಆದ್ದರಿಂದ ಸಂತಾನೋತ್ಪಾದನೆ ಆರೋಗ್ಯ (Reproductive Health) ಕ್ಷೇತ್ರದಲ್ಲಿ ಗಂಡಸರು ತೊಡಗಬೇಕಾದುದು ಮತ್ತು ಅವರ ಜವಾಬ್ದಾರಿ ಕುರಿತಂತೆ ಸುದೀರ್ಘ ಕಾಲದಲ್ಲಿ ಕಲಿತ ಪಾಠಗಳನ್ನು ನೋಡಿ, HIV ತಡೆ ಕಾರ್ಯಕ್ರಮಗಳು ತಾವೂ ಅವುಗಳನ್ನು ಅನುಸರಿಸಬೇಕಾದುದು ತುಂಬ ಮುಖ್ಯ.

ಲೈಂಗಿಕ ಸುರಕ್ಷತೆಯ ಪ್ರಶ್ನೆ ಬಂದಾಗ ಅದರಲ್ಲಿ ಗಂಡಸರದೂ ಪಾತ್ರವಿದೆ ಎಂಬ ಅರಿವನ್ನು ಇಟ್ಟುಕೊಂಡೇ ಕಾಣುವ ಪ್ರಯತ್ನ

***ಹೆಂಗಸರಿಗೆ ಲೈಂಗಿಕ ಸುರಕ್ಷತೆ ಲಭಿಸುವಂತಾಗಲು ಅವರೊಂದಿಗೆ ಕೂಡಿ ಪ್ರಯತ್ನಿಸಬೇಕಾದರೆ, ಪ್ರಾಕೃತಿಕ ಸಂಪನ್ಮೂಲ ನಿರ್ವಹಣೆ ಅಥವಾ ಸಣ್ಣ ಪುಟ್ಟ ಸಾಲಗಳ ಮೂಲಕ ಹೆಂಗಸರ ಸಬಲೀಕರಣ ಮಾಡುವ ಸಾಮೂಹಿಕ ಬಲ ಆಧರಿಸಿದ ಪ್ರಯತ್ನಗಳಿಗಿಂತ ತೀರಾ ಭಿನ್ನವಾದ ಪ್ರಯತ್ನ ನಡೆಸಬೇಕಾಗುತ್ತದೆ.***



ನಡೆಸುವುದಾದರೆ, ಒಂದು ಕಡೆ ಲೈಂಗಿಕ ಸುರಕ್ಷತೆಗೂ ಮತ್ತು ಇನ್ನೊಂದು ಕಡೆ ಲೈಂಗಿಕ ಆನಂದ, ಲೈಂಗಿಕ ಸಂಬಂಧ ಮತ್ತು ಲೈಂಗಿಕತೆ ಹಾಗೂ ಸಂತಾನೋತ್ಪಾದನೆ ಕುರಿತಂತೆ ಇರುವ ನಂಬಿಕೆಗಳು ಮತ್ತು ಮನೋಭಾವಗಳು ಇವುಗಳಿಗೂ ನಂಟಿರುವುದನ್ನು ಮೊಟ್ಟಮೊದಲಿಗೆ ಪರಿಗಣಿಸಬೇಕಾದುದು ಅಗತ್ಯವೆನಿಸುತ್ತದೆ. ಇದೊಂದು ಸಂಕೀರ್ಣ ಪ್ರಯತ್ನ, ಕೇವಲ ಸರಳ ಆರೋಗ್ಯ ಸಂದೇಶಗಳನ್ನು ನೀಡಿ ನೀಗುವಂಥದಲ್ಲ. ಇದರಲ್ಲಿ ನಮಗೆ ಎದುರಾಗುವ ಮೂರು ಗಂಭೀರ ಕ್ಷೇತ್ರಗಳೆಂದರೆ :

- ಗಂಡಸರು ಬಹುಜನ ಲೈಂಗಿಕ ಸಂಗಾತಿಗಳನ್ನು ಹೊಂದಿರುವುದು.
- ಸುರಕ್ಷಿತ ಲೈಂಗಿಕಾಭ್ಯಾಸಗಳ ಕುರಿತು ಗಂಡಸರಿಗೆ ತಿಳಿದಿಲ್ಲದಿರುವುದು ಮತ್ತು ಅವರು ಅದನ್ನು ಒಪ್ಪಿಕೊಳ್ಳದಿರುವುದು.
- ಹೆಂಗಸರಿಗೆ ಸುರಕ್ಷಿತ ಲೈಂಗಿಕಾಭ್ಯಾಸಗಳ ಅರಿವಿಲ್ಲದಿರುವುದು, ಅರಿವಿದ್ದರೂ ಅದನ್ನು ಜಾರಿಗೆ ತರಲು ಅವರಿಗೆ ಶಕ್ತಿಯಿಲ್ಲದಿರುವುದು.

ಈ ಮೂರಕ್ಕೂ ಬೇರೆ ಬೇರೆಯ ಪ್ರಯತ್ನಗಳು ಸಾಗಬೇಕು. ಕೆಲವು ನಿರ್ದಿಷ್ಟ ಗುಂಪಿಗೆ ಸೇರಿದ ಹೆಂಗಸರಿಗೆ ಸಬಲೀಕರಣದಿಂದ ರಕ್ಷಣೆ ದೊರಕಿದೆ, ಕೋಲ್ಕತ್ತೆಯ ಸೋನಾಗಚ್ಚಿಯಲ್ಲಿರುವಂಥ ವೇಶ್ಯಾವಾಟಿಕೆಗಳಲ್ಲಿರುವ ಬೆಲೆವೆಣ್ಣುಗಳ ಸಂಘಟಿತ ಗುಂಪುಗಳ ವಿಷಯಕ್ಕೆ ಹೇಳುವುದಾದರೆ ಅವರಿಗೆ ಇಂಥ ರಕ್ಷಣೆ ದೊರಕಿದೆ. ಆದರೆ ಇದೇ ರೀತಿಯ ಗುಂಪುಗಳ ಎಲ್ಲ ಹೆಂಗಸರಿಗೂ ಈ ರೀತಿಯ ರಕ್ಷಣೆ ಸಿಕ್ಕಿದೆಯೆಂದು ಹೇಳಲಾಗದು. ಅವರೆಲ್ಲ ಒತ್ತಾಯ, ಅತ್ಯಾಚಾರದ ಅಥವಾ ಅರಕ್ಷಿತವಾದ ಸಂಭೋಗಕ್ಕೆ ಈಡಾಗುವುದು ನಿಂತಿಲ್ಲ. ಸಬಲೀಕರಣಗೊಳಿಸುವುದರ ಮೂಲಕ ಇಂಥ ನಿರ್ದಿಷ್ಟ ಕ್ಷೇತ್ರಗಳಲ್ಲಿ ನಡೆಯುವ ಶೇ. 80 ರಷ್ಟು ಲೈಂಗಿಕ ಚಟುವಟಿಕೆಗಳನ್ನು ಸುರಕ್ಷಿತವಾಗಿಸಬಹುದೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಮಿಕ್ಕ ಶೇ.20 ರಷ್ಟು ಲೈಂಗಿಕ ಒಡನಾಟಗಳು ಈ ಹೆಂಗಸರಿಗೆ ಅರಕ್ಷಿತವಾಗಿಯೇ ಉಳಿಯುತ್ತವೆ, ಅದಕ್ಕೆ ಕಾರಣ ಅಂಥವರು ಒಪ್ಪಂದಕ್ಕೆ ಒಳಪಡದ ಲೈಂಗಿಕ ಸಂಬಂಧಗಳನ್ನು ಹೊಂದಿರುವುದು. ಇಂಥ ಸಂಬಂಧಗಳು ಅವರ ಪ್ರೇಮಿಗಳೊಂದಿಗೆ ಅಥವಾ ಸದಾಕಾಲಕ್ಕೂ ಅವರ ಹೊಟ್ಟೆಬಟ್ಟೆಗೆ ಒದಗಿಸುವವರೊಂದಿಗೆ ಇರಬಹುದು ಅಥವಾ ಅನಿವಾರ್ಯ ಪರಿಸ್ಥಿತಿಗಳಲ್ಲಿ ಬಲವಂತಕ್ಕೆ ಸಿಕ್ಕಿಸಿ ಲೈಂಗಿಕ ಸೇವೆ ಮಾಡಿಸಿಕೊಳ್ಳುವ ಪೋಲೀಸರೊಂದಿಗೆ ಅಥವಾ ಭೂಗತ ದುಷ್ಟರೊಂದಿಗೆ ಇರಬಹುದು. ಹಣ ಕೊಟ್ಟು ನಡೆಯುವ ವ್ಯವಹಾರಗಳಲ್ಲಿ ಸುರಕ್ಷತೆ ತರುವುದು ಸ್ವಲ್ಪ ಮಟ್ಟಿಗೆ ಸಾಧ್ಯವಾಗಬಹುದು, ಆದರೆ ಹೆಂಗಸರ ಪರಮ ಆಪ್ತ ಸಂಬಂಧಗಳನ್ನು ಮತ್ತು ಅವರು ಹೆಂಗಸಳಾಗಿರುವುದನ್ನು ಪರಿಗಣಿಸಿದಾಗ ಅಸಮಾನ ಬಲದ ಸಂಬಂಧಗಳು ಕಾರಣವಾಗಿ ಸುರಕ್ಷಿತ ಲೈಂಗಿಕ ಕ್ರಿಯೆಯನ್ನು ಅವರಿಂದ ಕಸಿದುಕೊಳ್ಳುತ್ತವೆ. ಇದಲ್ಲದೆ ಜೀವನೋಪಾಯಕ್ಕೆ ಇದೇ ಮಾರ್ಗ ಎಂಬುದಿಲ್ಲದೆ ಹಣ ಪಡೆದೋ ಪಡೆಯದೆಯೋ ಲೈಂಗಿಕ ಸೇವೆ ನೀಡುವ ಹೆಂಗಸರೂ ಇದ್ದಾರೆ. ನೌಕರಿಚಾಕರಿಗಳನ್ನು ಉಳಿಸಿಕೊಳ್ಳಲೋ ಅಥವಾ ಯಾವುದಾದರೂ ಹಣಕಾಸಿನ ತುರ್ತು ಅಗತ್ಯವನ್ನು ಹೊಂದಿಸಿಕೊಳ್ಳಲೂ ಈ ರೀತಿ ಲೈಂಗಿಕ ಸೇವೆಗೆ ಇಳಿಯುತ್ತಿರಬಹುದು. ಇನ್ನೂ ಹೇಳುವುದಾದರೆ, ಸುರಕ್ಷಿತ ಲೈಂಗಿಕ ಕ್ರಿಯೆಗಾಗಿ ಸಬಲೀಕರಣ ಕ್ರಿಯಾನ್ವಿತವಾಗಬೇಕಾದರೆ ವ್ಯಾಪಕವಾಗಿ ಹೆಣ್ಣು-ಗಂಡೆಂಬ ಪ್ರಶ್ನೆಯನ್ನು ಮತ್ತು ಅಧಿಕಾರದ ಪ್ರಶ್ನೆಯನ್ನು ಪರಿಗಣಿಸಬೇಕು, ಅದಿಲ್ಲದೆ ಕ್ರಿಯಾನ್ವಯನ ಸಾಧ್ಯವಿಲ್ಲ.

ವಿವಾಹಿತ ಹೆಂಗಸರ ವಿಷಯಕ್ಕೆ ಇನ್ನಷ್ಟು ಸಂಕೀರ್ಣತೆ ತಲೆದೋರುತ್ತದೆ. ಕಳೆದ ವರ್ಷ ಸಂರಕ್ಷಾದ ವೆಲ್ ವುಮೆನ್ ಕ್ಲಿನಿಕ್ (Well Women Clinic)ಗೆ ಚಿಕಿತ್ಸೆಗಾಗಿ ಬಂದ ಜನಸಾಮಾನ್ಯ ಹೆಂಗಸರ ಪೈಕಿ ವಿವಾಹಿತ ಹೆಂಗಸರಲ್ಲಿ ಶೇ.71.2 ರಷ್ಟು ಜನಕ್ಕೆ ಲೈಂಗಿಕವಾಗಿ ವರ್ಗಾಯಿಸಿದ ಸೋಂಕುಗಳು (STIs) ಇದ್ದವು. ಇವರೆಲ್ಲರೂ ತಮ್ಮ ಗಂಡಂದಿರೊಂದಿಗೆ ಮಾತ್ರ ಲೈಂಗಿಕ ಸಂಬಂಧ ಹೊಂದಿದ್ದವರು. ಇವರಲ್ಲಿ ಅರ್ಧದಷ್ಟು ಹೆಂಗಸರಿಗೆ ತಮ್ಮ ಗಂಡನಿಂದಲೆ ಈ ಸೋಂಕು ತಗುಲಿರಬಹುದೆ ಎಂದು ಅನುಮಾನ ಸಹ ಹುಟ್ಟಿರಲಿಲ್ಲ. ಇಂಥ ಕಡೆ ಸಬಲೀಕರಣ ತಾನೆ ಏನು ಮಾಡೀತು? ಉಳಿದ ಅರ್ಧದಷ್ಟು ಹೆಂಗಸರಿಗೆ ತಮ್ಮ ಗಂಡಂದಿರ ಹೊರಚಾಳಿ ಗೊತ್ತಿದ್ದರೂ ಅದೊಂದು ಸಮಸ್ಯೆ ಎನಿಸಿದ್ದುದು ಅವರಲ್ಲಿ ಶೇ.10 ಕ್ಕಿಂತ ಕಡಿಮೆ ಹೆಂಗಸರಿಗೆ ಮಾತ್ರ. ಇಲ್ಲಿ ನಮಗೆ ಸವಾಲಾಗಿರುವುದು ಯಾವುದೆಂದರೆ ಲೈಂಗಿಕ ಒಡನಾಟಗಳು ಆರ್ಥಿಕ ಮತ್ತು ಸಾಮಾಜಿಕ ಅವಲಂಬನೆಗಾಗಿ ಹುಟ್ಟಿದ ವ್ಯಾಪಕ ಸಂಬಂಧಗಳಲ್ಲಷ್ಟೆ ತಳವೂರಿಕೆ ಎಂದಿಲ್ಲದೆ ಪ್ರೀತಿ-ಪ್ರೇಮ ಮತ್ತು ನಿಷ್ಠೆಗಳ ಪರಮಾಪ್ತ ಸಂಬಂಧಗಳಲ್ಲೂ ತಳವೂರಿಕೆ ಎಂಬುದು.

ಹೆಂಗಸರು ಸುರಕ್ಷಿತರಾಗಿರಬೇಕೆಂದರೆ ಗಂಡಸರೂ ಅದನ್ನೆ ಅಪೇಕ್ಷಿಸಬೇಕು. ಭಾರತದಲ್ಲಿ ಲೈಂಗಿಕ ಚಟುವಟಿಕೆ ನಡೆಸುವ ವಯಸ್ಕರಲ್ಲಿ ಶೇ. 12.5ರಷ್ಟು ಜನಕ್ಕೆ ಲೈಂಗಿಕವಾಗಿ ವರ್ಗಾಯಿಸುವ ಸೋಂಕುಗಳು (STIs) ಇವೆಯೆಂಬುದು ಅಂಥವರು ಬಹು ಜನ ಲೈಂಗಿಕ ಸಂಗಾತಿಗಳನ್ನು ಹೊಂದಿದ್ದಾರೆ ಎಂಬುದನ್ನೆ ತೋರಿಸುತ್ತದೆ. ಇಂಥ ಅಭ್ಯಾಸಕ್ಕೆ ಅವರ ಸಂಸ್ಕೃತಿ ಗಂಡಸರಿಗೆ ಅನುಮತಿ ನೀಡಿರಬಹುದು ಅಥವಾ ಹೆಂಗಸರಾದರೆ ಜೀವನೋಪಾಯಕ್ಕಾಗಿ ಒತ್ತಾಯಕ್ಕೋ ಹಣಕ್ಕೋ ಮಣಿದಿರಬಹುದು. ಲೈಂಗಿಕಾಭ್ಯಾಸದ ಈ ಮಗ್ಗುಲನ್ನು ಭಾರತದಲ್ಲಿ ಇನ್ನೂ ಒಳಹೊಕ್ಕು ನೋಡಿಲ್ಲ. ಗಂಡಸರಲ್ಲಿ ಬಹುಜನ ಲೈಂಗಿಕ ಸಂಗಾತಿಗಳನ್ನು ಹೊಂದಿರುವ ಈ ಅಭ್ಯಾಸ ಮದುವೆಯ ಅಂಗೀಕಾರ ಪಡೆದು ನಡೆಯುವ ಲೈಂಗಿಕ ಕ್ರಿಯೆಯಲ್ಲಿ ಪೂರೈಸಿಕೊಳ್ಳಲಾಗದ ಲೈಂಗಿಕ ಅಗತ್ಯವನ್ನು ಹೊರಗಡೆ ಪೂರೈಸುವುದಕ್ಕಾಗಿ ಮಾತ್ರ ನಡೆಯುತ್ತದೆಯೆ? ಹಾಗೆ ಲೈಂಗಿಕ ತೃಪ್ತಿ ಪಡೆಯಬಹುದೆಂದು ಗಂಡಸರಿಗೆ ಹೆಚ್ಚಿನ ಅಂಗೀಕಾರವಿದೆಯೆಂದೇ ಅವರು ಬೇರೆ ಸಂಗಾತಿಗಳನ್ನು ಹುಡುಕಿಕೊಳ್ಳುತ್ತಿದ್ದರೆ, ಹೆಂಗಸರು ತಮ್ಮ ಅತೃಪ್ತ ಲೈಂಗಿಕ ಕಾಮನೆಗಳನ್ನು ಅದುಮಿಟ್ಟು ತಮ್ಮ ಹಣೆಬರಹವೆಂದು ಒಪ್ಪಿಕೊಳ್ಳುವಂತೆ ನಿಗ್ರಹಿಸಲಾಗುತ್ತಿದೆಯಲ್ಲವೆ? ಬಹುತೇಕ ಎಲ್ಲ ಗಂಡಸರು ವಿವಾಹದ ಹೊರಗೆ ನಡೆಸುವ ಲೈಂಗಿಕ ಸಂಬಂಧಗಳು

ಅವರ ವಿವಾಹಿತ ಪತ್ನಿಯರಿಗೆ ಗೊತ್ತಿರುವುದೇ ಇಲ್ಲವೆಂದು ತಿಳಿದುಬರುತ್ತದೆ. ಅಂದ ಮೇಲೆ, ತಾವು ಮಾಡುತ್ತಿರುವುದು ಸಾಮಾಜಿಕವಾಗಿ ಸಮ್ಮತವಲ್ಲ ಎಂಬುದನ್ನು ಗಂಡಸರು ಒಪ್ಪಿಕೊಳ್ಳುತ್ತಾರೆಂದು ಯಾರೂ ಊಹಿಸಬಲ್ಲೆವು ಅಲ್ಲವೆ? ಹಾಗಿದ್ದರೂ, ಗಂಡಸರಿಗೆ ಸಿಕ್ಕಿರುವ ಇಂಥ ಸಾಮಾಜಿಕ ಅಂಗೀಕಾರದಿಂದಾಗಿ ಅವರ ಹೊರಚಾಳಿಯ ಅಭ್ಯಾಸವನ್ನು ಪ್ರಶ್ನಿಸುವುದಕ್ಕೆ ಅಡ್ಡಿಯಾಗುತ್ತಿದೆ.

ಇದಕ್ಕೆ ಇನ್ನೂ ಒಂದು ಆಯಾಮವಿದ್ದು, ಹೆಂಗಸರ ದೌರ್ಬಲ್ಯವನ್ನು ಪರಿಗಣಿಸಿದಾಗ ಹೆಂಗಸರ ಕೈವಶದಲ್ಲಿಯೇ ಇರುವಂಥ ಸಾಧನಗಳಿವೆಯೆ ಎಂದೂ ನೋಡಬೇಕು. ಆದರೆ, HIV ಹರಡುವುದನ್ನು ಹತೋಟಿಯಲ್ಲಿಡುವುದಕ್ಕೆ ಅತ್ಯಂತ ಪರಿಣಾಮಕಾರಿಯಾದ ಏಕಮಾತ್ರ ನಿರೋಧಕ ವಿಧಾನವೆಂದು ಕಂಡುಕೊಂಡ ಕಾಂಡೋಮ್‌ಗಳನ್ನು (ನಿರೋಧಕ ಕವಚಗಳನ್ನು) ಕೇವಲ ಗಂಡಸರು ಕೈಗೊಳ್ಳುವುದಾದ ಹತೋಟಿಯನ್ನು ಮಾತ್ರ ಮನಸ್ಸಿನಲ್ಲಿಟ್ಟುಕೊಂಡು ಸಂಶೋಧಿಸಿ ಮಾರಾಟ ಮಾಡಲಾಗುತ್ತಿದೆ. ಇದೊಂದು ವ್ಯಂಗ್ಯವೇ ಸರಿ. ಗಂಡಸರು ಬಳಸುವ ಕಾಂಡೋಮ್‌ನೊಂದಿಗೆ ಹೋಲಿಸಿದರೆ ಹೆಂಗಸರು ಬಳಸಲೆಂದಿರುವ ಕಾಂಡೋಮ್ ಏನೇನೂ ಅಲ್ಲದ ಕಳಪೆ ಪದಾರ್ಥ, ಭಾರತದಲ್ಲಿ ಕೊಳ್ಳಲು ಸಿಗುವುದೂ ಇಲ್ಲ. ಪ್ರಪಂಚದ ಕೆಲವೆಡೆ ಸಿಕ್ಕಿದರೂ ಅದರ ಬೆಲೆ ಗಂಡಸರ ಕಾಂಡೋಮ್‌ಗಳಿಗಿಂತ ಎಷ್ಟೋ ಪಟ್ಟು ಹೆಚ್ಚು. HIV ಇಡೀ ಜಗತ್ತಿಗೇ ಹಬ್ಬಿ 20 ವರ್ಷಗಳೆ ಕಳೆದು ಹೋಗಿದ್ದರೂ ಹೆಂಗಸರ ಕೈವಶದ ನಿರೋಧಕ ವಿಧಾನಗಳನ್ನು ಶೀಘ್ರವಾಗಿ ಸಂಶೋಧಿಸುವುದಕ್ಕೆ ನಡೆದಿರುವ ಪ್ರಯತ್ನ ಎಲ್ಲೋ ಅತ್ಯಲ್ಪವೆನ್ನಬೇಕು.

HIV ಹರಡುತ್ತಿರುವ ಸಂದರ್ಭದಲ್ಲಿ ಅದರೊಂದಿಗೇ ಹೆಂಗಸರು ಮತ್ತು ಗಂಡಸರು ಇಬ್ಬರೂ ಲೈಂಗಿಕ ಸುರಕ್ಷತೆಯ ಪ್ರಶ್ನೆ ಎದುರಿಸುತ್ತಿರುವಾಗ, ಅನೇಕ ಸಂಗಾತಿಗಳೊಡನೆ ತಮ್ಮ ಅರಕ್ಷಿತ ಲೈಂಗಿಕ ಅಭ್ಯಾಸ ಎಷ್ಟು ಸರಿ ಎಂದು ಗಂಡಸರು ತಮ್ಮ ವರ್ತನೆಯನ್ನು ಮರುಪರಿಶೀಲಿಸುವ ಅಗತ್ಯ ಈಗ ಉಂಟಾಗಿದೆ. ಸದ್ಯಕ್ಕಂತೂ ನಮಗೆ ಹೆಚ್ಚು ಗೊತ್ತಿಲ್ಲ. ಗಂಡಸರ ಇಂಥ ಅಭ್ಯಾಸಕ್ಕೆ ಮೂಲ ಯಾವುದಿರಬಹುದು ಎಂಬ ವಿಷಯಕ್ಕೆ ಅನೇಕ ಊಹೆಗಳಿವೆ ; ಹಲವು ಬಗೆಯ ಲೈಂಗಿಕಾನುಭವ ಬೇಕೆನ್ನುವ ದೈಹಿಕ ಬಯಕೆಯೋ? ಲೈಂಗಿಕ ಆಧಿಪತ್ಯದ ಆಕ್ರಮಣದ ಮನೋಭಾವವೋ? ಅವರು ವಿಭಿನ್ನ ಆನಂದದ ಮೂಲಗಳನ್ನು ಹುಡುಕಿಕೊಳ್ಳಲು ಸಮಾಜ ಒಪ್ಪಿರುವುದೋ? ಈ ಕ್ಷೇತ್ರದಲ್ಲಿ ಇನ್ನೂ ಹೆಚ್ಚಿನ ಸಂಶೋಧನೆ ಅಗತ್ಯವಿದೆ. ಹೀಗಂದಾಗ, ಸುರಕ್ಷಿತ ಲೈಂಗಿಕ ಕ್ರಿಯೆ ಎಂದರೆ ಏನು ಎಂದು ಎಷ್ಟು ಜನ ಗಂಡಸರಿಗೆ ಗೊತ್ತಿದೆ ಅಥವಾ ಅರ್ಥವಾಗಿದೆ ಮತ್ತು ಎಷ್ಟರ ಮಟ್ಟಿಗೆ ಅದನ್ನು ಅಂಗೀಕರಿಸಿದ್ದಾರೆ ಎಂಬತ್ತಲೂ ನಮ್ಮ ಗಮನ ಹರಿಸಬೇಕಾಗುತ್ತದೆ. ಕ್ಷೇತ್ರಗಳಿಂದ ಅನೌಪಚಾರಿಕವಾಗಿ ಸಂಗ್ರಹಿಸಿದ ಬಹಳಷ್ಟು ಮಾಹಿತಿಗಳು ತೋರಿಸುವಂತೆ ಲೈಂಗಿಕ ಆರೋಗ್ಯ ಕುರಿತು ಬಹು ಜನಕ್ಕೆ ಅಗಾಧ ಅಜ್ಞಾನವಿದೆ, ಹೀಗಿರುವಾಗ ಸುರಕ್ಷಿತ ಲೈಂಗಿಕ ಅಭ್ಯಾಸಗಳು ನನಸಾಗುವ ದಿನಗಳು ಹತ್ತಿರದಲ್ಲೆಲ್ಲೂ ಕಾಣುತ್ತಿಲ್ಲ.

*ಹೆಂಗಸರು ಸುರಕ್ಷಿತರಾಗಿರಬೇಕೆಂದರೆ ಗಂಡಸರೂ ಅದನ್ನೆ ಅಪೇಕ್ಷಿಸಬೇಕು.*

ಸುರಕ್ಷಿತ ಲೈಂಗಿಕಾಭ್ಯಾಸಗಳನ್ನು ಅನುಸರಿಸಿ HIV ಸೋಂಕನ್ನು ತಡೆಗಟ್ಟಬೇಕಾದರೆ ಅದಕ್ಕಾಗಿ ಆಕ್ರಮಣಶೀಲ ಪ್ರಯತ್ನಗಳನ್ನು ಬಿಟ್ಟು ಸಹಯೋಗದ ಪ್ರಯತ್ನಗಳನ್ನು ಕೈಗೊಳ್ಳಬೇಕಾದುದು ಅಗತ್ಯ. ಅವು ನೀತಿಯ ಕಟ್ಟುಪಾಡುಗಳಿಗಿಂತ ಔದಾರ್ಯದಿಂದ ಕೂಡಿದವುಗಳಾಗಿ ಮತ್ತು ನಿಂದಿಸುವುದಕ್ಕಿಂತ ಅರ್ಥಮಾಡಿಕೊಳ್ಳುವಂಥವಾಗಿ ಇರಬೇಕು. ಗಂಡಸರು ತಮ್ಮ ಹಳೆಯ ಅಭ್ಯಾಸಗಳನ್ನು ಬದಲಿಸಿಕೊಂಡು ಜವಾಬ್ದಾರಿಯಿಂದ ಕೂಡಿದ ಸುರಕ್ಷಿತ ಲೈಂಗಿಕಾಭ್ಯಾಸಗಳನ್ನು ಬೆಳೆಸಿಕೊಳ್ಳಬೇಕೆನ್ನುವ ಗುರಿ ಸಾಧಿಸಬೇಕಾದರೆ ಅವರ ಲೈಂಗಿಕ ವಿಷಯವಾದ ದೌರ್ಬಲ್ಯಗಳೇನೆಂದು ವಿಚಾರ ಮಾಡಿ ನೋಡಿ ಅವರ ಅಗತ್ಯಗಳನ್ನು ಅರ್ಥ ಮಾಡಿಕೊಳ್ಳಬೇಕು. ಇದುವರೆಗೂ ನಡೆಸಿದ ಸಂದೇಶಗಳಿಂದ ಲೈಂಗಿಕ ಅಭ್ಯಾಸಗಳನ್ನು ಬದಲಿಸುವುದರಲ್ಲಿ ಹೇಳಿಕೊಳ್ಳುವಂಥ ಸಾಧನೆ ಏನೂ ಆಗಿಲ್ಲ. ಆದ್ದರಿಂದ, ತಿಳಿಸಿಹೇಳುವಾಗ 'ಇದು ಕೂಡದು' ಎನ್ನುವುದಕ್ಕಿಂತ 'ಇದನ್ನು ಮಾಡಿ' ಎನ್ನುವ ಆಂದೋಳನ ನಡೆಯಬೇಕಾದ ಅಗತ್ಯವಿದೆ. ಗಂಡಸರು ಈಗ ತಾವು ಅನುಭವಿಸುತ್ತಿರುವ, ರೋಗಕ್ಕೆ ಈಡಾದೆವೆಂಬ ಭಯದ ನೆರಳಿನಿಂದ ಹೊರಬಂದು ಆನಂದಕರವಾದ ಆದರೆ ಆರೋಗ್ಯವರ್ಧಕವಾದ ಅಭ್ಯಾಸಗಳಿಗೆ ಒಲಿಯಬೇಕು. ಗಂಡಸರು ಜವಾಬ್ದಾರಿಯರಿತವರಾಗಿ ತಾವೇ ತಮ್ಮನ್ನು ತಿದ್ದಿಕೊಂಡು ರೂಪಿಸಿಕೊಳ್ಳುವುದಕ್ಕೆ ಗಮನ ಕೇಂದ್ರೀಕರಿಸಬೇಕಾದುದು ಈಗಿನ ಅಗತ್ಯವಾಗಿದೆ. ಗಂಡಸುತನ ಈಗ ಹೊಸ ಅರ್ಥ ಪಡೆಯಬೇಕು : ಗಂಡಸುತನವೆಂದರೆ 'ಧೃಷ್ಟತೆ' ಮತ್ತು ಸೊಗಸುಗಾರಿಕೆಯಿಂದ ಕೂಡಿದ್ದರೂ ಬೇಹುಷಾರಾಗದೆ ಜವಾಬ್ದಾರಿಯನ್ನು ಮೈಗೂಡಿಸಿಕೊಳ್ಳುವುದಾಗಬೇಕು.

*ಇದಕ್ಕೆ ಇನ್ನೂ ಒಂದು ಆಯಾಮವಿದ್ದು, ಹೆಂಗಸರ ದೌರ್ಬಲ್ಯವನ್ನು ಪರಿಗಣಿಸಿದಾಗ ಹೆಂಗಸರ ಕೈವಶದಲ್ಲಿಯೇ ಇರುವಂಥ ಸಾಧನಗಳಿವೆಯೆ ಎಂದೂ ನೋಡಬೇಕು.*

ಈ ಸಾಂಕ್ರಾಮಿಕ ಹಬ್ಬದಂತೆ ತಡೆಯಲು ಭಾರತಕ್ಕೆ ಇದು ಕಡೆಯ ಅವಕಾಶ. ಭಾರತದ ಗಂಡಸರು ರಾಷ್ಟ್ರವನ್ನು ಉಳಿಸಲು ಸಕಾಲದಲ್ಲಿ ಪ್ರತಿಕ್ರಿಯಿಸಿ ನಡೆದುಕೊಳ್ಳಲಿಲ್ಲವೆ ಎಂದು ಮುಂದಿನ ಪೀಳಿಗೆ ಪ್ರಶ್ನಿಸುವಂತಾಗಬಾರದು. ಒಂದು ಸಮುದಾಯವಾಗಿ ಮುಂದಡಿಯಿಟ್ಟು, ಬದಲಾವಣೆ ತರಬೇಕಾದ ಜವಾಬ್ದಾರಿ ಈಗ ಗಂಡಸರ ಮೇಲಿದೆ ಅವರು ತಮ್ಮ ಮನಸ್ಸನ್ನು ತಾವೇ ಶೋಧಿಸಿಕೊಳ್ಳಲಿ ಮತ್ತು ಸುರಕ್ಷಿತ ಲೈಂಗಿಕ ಕ್ರಿಯೆ ಆಚರಿಸಲು ಪರಸ್ಪರ ಒತ್ತಾಸೆ ನೀಡಲಿ.

*ಸಂಘಮಿತ್ರ ಅಯ್ಯಂಗಾರ್ ನುರಿತ ಮನೋವೈದ್ಯಕೀಯ ಸಮಾಜ ಕಾರ್ಯಕರ್ತೆ. ಕಳೆದ 20 ವರ್ಷಗಳಿಂದ ಅಂಗವಿಕಲತೆ, ಮಾನಸಿಕ ಆರೋಗ್ಯ HIV /ಏಯ್ಡ್ಸ್ ನಿವಾರಣೆ ಕ್ಷೇತ್ರಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ರೋಗ ನಿರೋಧ ಮತ್ತು ಆರೋಗ್ಯ ರಕ್ಷಣೆಗಾಗಿ ಹಲವಾರು ರೀತಿಯಲ್ಲಿ ಸೇವೆ ಸಲ್ಲಿಸುತ್ತಿರುವ ಸಮೂಹ ಸಂಘಟನೆಯ ಸ್ಥಾಪಕ ಸದಸ್ಯರಾಗಿರುವ ಅವರು ಈಗ ಅದರ ನಿರ್ದೇಶಕರೂ ಆಗಿದ್ದಾರೆ.*

*ಅನುವಾದ : ಎನ್.ವಿಶ್ವನಾಥ*

HIV (Human Immuno-deficiency Virus ಮಾನವರಲ್ಲಿರೋಗ ಪ್ರತಿರಕ್ಷಾ ಕೊರತೆ ವೈರಸ್) ಮತ್ತು RTI (Reproductive Track Infection) ಅಂದರೆ ಜನನಾಂಗ ದ್ವಾರದ ಸೋಂಕು. ಇದನ್ನು PDI ಅಂದರೆ ಶ್ರೋಣಿ ಕುಹರ ಉರಿಯೂತದ ಕಾಯಿಲೆ (Pelvic Inflamatory Disease) ಎಂದೂ ಕರೆಯುತ್ತಾರೆ - ಇವೆರಡೂ ಲೈಂಗಿಕ ಸಂಪರ್ಕದಿಂದ ಬರುವ ರೋಗಗಳಾಗಿದ್ದು ಹೆಂಗಸರನ್ನು ಹೆಚ್ಚಾಗಿ ಕಾಡುತ್ತವೆ. ಮಕ್ಕಳನ್ನು ಹಡೆಯುವ ವಯಸ್ಸಿನಲ್ಲಿರುವ ಹೆಂಗಸರಲ್ಲಿ ಶ್ರೋ.ಉ.ಕಾಯಿಲೆಗಳು ತೀವ್ರವಾದ ದೀರ್ಘಕಾಲದ ಜಾಡ್ಯಕ್ಕೆ ಹೆಚ್ಚಾಗಿ ಕಾರಣವಾಗುತ್ತವೆ. ಇಂಥ ಗೋರಿಗಳ ಖಚಿತ ಸಂಖ್ಯೆ ತಿಳಿದುಬಂದಿಲ್ಲ, ಆದರೂ 2002 ನೇ ಇಸವಿಯ ಹೊತ್ತಿಗೆ, 1990 ರಲ್ಲಿ 15 ವರ್ಷ ತುಂಬಿದ್ದ ಪ್ರತಿ 20 ಹೆಂಗಸರಲ್ಲಿ ಒಬ್ಬಾಕೆ ಕಡೆಯ ಪಕ್ಷ ಒಂದು ಸಾರಿಯಾದರೂ ಶ್ರೋ.ಉ.ಕಾಯಿಲೆಗೆ ಗುರಿಯಾಗಿರುತ್ತಾಳೆ ಎಂದು ಅಂದಾಜಿಸಿದ್ದಾರೆ.

ಶ್ರೋ.ಉ.ಕಾಯಿಲೆಗೆ ಗುರಿಯಾಗುವ ಅಪಾಯ ಇರುವವರೆಂದರೆ ಚಿಕ್ಕ ವಯಸ್ಸಿನವರು, ಹೆಚ್ಚು ಜನರೊಂದಿಗೆ ಲೈಂಗಿಕ ಸಂಪರ್ಕವಿಟ್ಟುಕೊಂಡಿರುವವರು ಮತ್ತು ಕಡಿಮೆ ಸಾಮಾಜಿಕ ಆರ್ಥಿಕ ಅಂತಸ್ತಿನವರು. HIV ಮತ್ತು STD (ಅಂದರೆ ಲೆಂಗಿಕವಾಗಿ ವರ್ಗಾಯಿಸುವ ರೋಗಗಳು - Sexually Transforable Diseases ) ಈ ಗುಂಪಿನವರಲ್ಲಿ ಹೆಚ್ಚುತ್ತಿವೆ. ಈ ಸೋಂಕುಗಳು ಮತ್ತು ಶ್ರೋ.ಉ.ಕಾಯಿಲೆಗಳು ಲೈಂಗಿಕವಾಗಿ ವರ್ಗಾಯಿಸಲ್ಪಡುವುದರಿಂದ ಶ್ರೋ.ಉ. ಕಾಯಿಲೆ ಇರುವ ಹೆಂಗಸರಿಗೆ HIV ತಗುಲುವ ಅಪಾಯ ಹೆಚ್ಚು.

### ಹೆಂಗಸರೆ ಸುಲಭ ಬಲಿಗಳು

ಹೆಣ್ಣು ಗಂಡೆಂಬ ತಾರತಮ್ಯದಿಂದಾಗಿ, HIV ಸೊಂಕಿನ ವಿರುದ್ಧ ಸ್ವರಕ್ಷಣೆ ಮಾಡಿಕೊಳ್ಳುವ ಅವಕಾಶದಿಂದ ವಂಚಿತರಾಗುವವರು ಸಾಮಾನ್ಯವಾಗಿ ಹೆಂಗಸರೆ ಎಂಬುದು ವ್ಯಾಪಕ ಅನುಭವದಿಂದ ಕಂಡುಬಂದಿದೆ. ಕೆಲವು ಸಮುದಾಯಗಳಲ್ಲಿ ಹೆಂಗಸರಿಗೆ ಉದ್ಯೋಗಕ್ಕೆ ವಿದ್ಯಾಭ್ಯಾಸ ಮುಖ್ಯವೆಂದು ಪರಿಗಣಿಸುವುದೇ ಇಲ್ಲ ; ಏನಿದ್ದರೂ ಅವರ ಹಣೆಬರಹ ಗೃಹಕೃತ್ಯಕ್ಕೆ, ಮನೆಯವರ ಸೇವೆಗೆ ಮೀಸಲು. ಸೈನಿಕ ವಿಕ್ಷೋಭಗಳಾದಾಗ, ಜಾತಿ ಜಾತಿಗಳ ಹೆಸರಿನಲ್ಲಿ ಕೊಲೆಗಳಾದಾಗ, ಪೋಲೀಸರ / ಸೆರೆಮನೆ ಅಧಿಕಾರಿಗಳ ಕೈವಶದಲ್ಲಿಸಿಕ್ಕಿದಾಗ ನಿರಾಶ್ರಿತರ ನಿರ್ವಹಣೆ ನೋಡಿಕೊಳ್ಳುವವರ, ಮಾನಸಿಕ ಚಿಕಿತ್ಸಾ ಆಸ್ಪತ್ರೆಗಳ ಮತ್ತು ಅನಾಥಾಲಯಗಳ ಅಧೀನದಲ್ಲಿದ್ದಾಗ ಹೆಂಗಸರು ಲೈಂಗಿಕವಾಗಿ ಬಲಿಯಾಗುತ್ತಾರೆಂಬುದು ಸಹ ಗೊತ್ತಿರುವ ಮಾತೇ. ಇಂಥ ಸಂದರ್ಭಗಳಲ್ಲಿ ಲೈಂಗಿಕ ದೌರ್ಜನ್ಯಕ್ಕೀಡಾಗಿ ಮತ್ತು ಅವಿವಾಹಿತರಾಗಿದ್ದಾಗಲೆ ತಾಯ್ತನ ಬಂದಾಗ ಅವರ ಪರಿಸ್ಥಿತಿ ಅತೀವ ಕಠಿಣವಾಗುತ್ತದೆ.

ಹೆಂಗಸರಲ್ಲಿ ಲೈಂಗಿಕವಾಗಿ ವರ್ಗಾಯಿಸುವ ರೋಗಗಳನ್ನು ತಡೆಗಟ್ಟಬೇಕಾದರೆ ಅದಕ್ಕಾಗಿ ಬಾಲ್ಯ ವಿವಾಹ, ಪ್ರಾಪ್ತ ವಯಸ್ಕರಲ್ಲದ ಹೆಣ್ಣುಗಳು ಗರ್ಭಿಣಿಯರಾಗುವುದು, ದೌರ್ಜನ್ಯಪೂರ್ವಕ ಲೈಂಗಿಕ ಕ್ರಿಯೆ (ಅತ್ಯಾಚಾರ ಮತ್ತು ಬಲವಂತ ಸಂಭೋಗ ಇತ್ಯಾದಿ) ಇಂಥವನ್ನು ತಡೆಗಟ್ಟಬೇಕಾದುದು ಅಗತ್ಯ.

ಅನೇಕ ಚಿಕ್ಕ ವಯಸ್ಸಿನ ಹೆಂಗಸರು ಲೈಂಗಿಕ ಚಟುವಟಿಕೆ ಪ್ರಾರಂಭಿಸಿದ ಸ್ವಲ್ಪ ಕಾಲದಲ್ಲೆ ಸೋಂಕಿಗೆ ಈಡಾಗುತ್ತಾರೆ. ಯಾರೋ ಬೇರೆಯವರು ರಕ್ಷಣೆಯಿಲ್ಲದ ಅವರ ಅಭ್ಯಾಸಗಳು ಹೀಗೇ ಇರಬೇಕೆಂದು ನಿರ್ಧರಿಸುವುದೇ ಇದಕ್ಕೆ ಕಾರಣ. ಉದಾಹರಣೆಗೆ ಮುಂಬಯಿಯ ನವರೋಸಿ ವಾಡಿಯಾ ಹೆರಿಗೆ ಆಸ್ಪತ್ರೆಗೆ ಸೋಂಕಿನ ಚಿಕಿತ್ಸೆಗೆಂದು ಬಂದ ಹೆಂಗಸರಲ್ಲಿ ಶೇ.92 ರಷ್ಟು ಜನ ಮದುವೆಯಾಗಿ ಇನ್ನೂ 4 ತಿಂಗಳಿಂದ 2 ವರುಷದೊಳಗೆ ಮೊದಲ ಸಲವಾಗಿ ಗರ್ಭಿಣಿಯರಾದವರು.

### ಲೈಂಗಿಕವಾಗಿ ವರ್ಗಾಯಿಸುವ ರೋಗಗಳ ಇನ್ನಷ್ಟು ವಿವರ

ಹೆಂಗಸರಿಗಿಂತ ಹೆಚ್ಚು ಜನ ಗಂಡಸರಿಗೆ STD ರೋಗಗಳು ತಗುಲಿದ್ದರೂ, ಹೆಚ್ಚಿನ ನೋವು ನರಳಿಕೆ ಅನುಭವಿಸುವವರು ಹೆಚ್ಚಾಗಿ ಹೆಂಗಸರೇ ಎಂಬುದು ವಿಷಾದಕರ ಕಟು ಸತ್ಯ.

ಈಗ ಅತಿ ಸಾಮಾನ್ಯ STD ರೋಗಗಳೆಂದರೆ ಜನನಾಂಗದ ಸರ್ಪಸುತ್ತು, ಜನನಾಂಗದ ಗಂತಿಗಳು, ಗಾನಕಾಕಸು ಅಲ್ಲದ (ಶುಕ್ಲಮೇಹದ ಬ್ಯಾಕ್ಟೀರಿಯಾ ಅಲ್ಲದ) ಜನನಾಂಗದ ಸೋಂಕು, ಗೊನೇರಿಯಾ (ಶುಕ್ಲಮೇಹ ರೋಗ), ಸಿಫಿಲಿಸ್ (ಪರಂಗಿ ಹುಣ್ಣು), ಯೋನಿಗೆ ಸಂಬಂಧಿಸಿದ ಸಣ್ಣ ಪುಟ್ಟ ಸೋಂಕುಗಳಾದ ಟ್ರೈಕೋಮೋನಿಯಾಸಿಸ್ (trichomoniasis) ಮತ್ತು ಕ್ಯಾಂಡಿಡೋಸಿಸ್ (candidosis), ಮತ್ತು ಏಯ್ಡ್ಸ್ (AIDS).

### ಜನನಾಂಗದ ಸರ್ಪಸುತ್ತು

ತುಟಿಗಳು ಮತ್ತು ಮೂಗಿನ ಮೇಲೆ ಬಿರುಕು ಸಹಿತ ಉರಿ ಹುಣ್ಣಿಗೆ (Cold sore) ಕಾರಣವಾಗುವ ವೈರಸ್‌ಗೆ ಅತಿ ಹತ್ತಿರದ್ದು ಎನ್ನಬಹುದಾದ ವೈರಸ್‌ನಿಂದ ಜನನಾಂಗದ ಸರ್ಪಸುತ್ತು ತಗುಲುತ್ತದೆ. ಸರ್ಪಸುತ್ತಿಗೆ ಮದ್ದಿಲ್ಲವಾದರೂ, ಇದಕ್ಕೆ ಲಸಿಕೆ ಕಂಡು ಹಿಡಿಯುವ ಸಂಶೋಧನೆಯಂತೂ ಮುಂದುವರಿಯುತ್ತಿದೆ. ಈ ರೋಗಕ್ಕೆ ಇದೇ ಎಂದು ಒಂದು ಚಿಕಿತ್ಸೆ ಇಲ್ಲ. ಆದರೂ ಅನೇಕರಿಗೆ ನೋವು ನಿವಾರಕಗಳ ಸೇವನೆಯಿಂದ ಅಥವಾ ಯೋನಿಮುಖಕ್ಕೆ ಸಂವೇದನಹಾರಿ ಮುಲಾಮು ಲೇಪಿಸುವುದರಿಂದ ಸ್ವಲ್ಪ ಪರಿಹಾರ ಸಿಗುತ್ತದೆ. ಮೊತ್ತ ಮೊದಲಿಗೆ ಅಸಿಕ್ಲೋವಿರ್ (Acyclovir- Zovirse) ಎಂಬ ಹೆಸರಿನೊಂದಿಗೆ ಬಂದ ವೈರಸ್ ಪ್ರತಿರೋಧ ಔಷಧಿಗಳನ್ನು ಸೋಂಕಿನ ಆರಂಭದಲ್ಲೆ ಕೊಟ್ಟರೆ ರೋಗ ಲಕ್ಷಣದ ತೀವ್ರತೆ ತಗ್ಗುತ್ತದೆ. ''ಸರ್ಪಸುತ್ತು ಪ್ರೇಮದಂತಲ್ಲ, ಶಾಸ್ವತವಾಗಿ ಉಳಿಯುತ್ತದೆ'' ಎನ್ನುವ ಹೇಳಿಕೆ ನಿಜವಲ್ಲ!

*ಹೆಂಗಸರಲ್ಲಿ ಲೈಂಗಿಕವಾಗಿ ವರ್ಗಾಯಿಸುವ ರೋಗಗಳನ್ನು ತಡೆಗಟ್ಟಬೇಕಾದರೆ ಅದಕ್ಕಾಗಿ ಬಾಲ್ಯ ವಿವಾಹ, ಪ್ರಾಪ್ತ ವಯಸ್ಕರಲ್ಲದ ಹೆಣ್ಣುಗಳು ಗರ್ಭಿಣಿಯರಾಗುವುದು, ದೌರ್ಜನ್ಯಪೂರ್ವಕ ಲೈಂಗಿಕ ಕ್ರಿಯೆ (ಅತ್ಯಾಚಾರ ಮತ್ತು ಬಲವಂತ ಸಂಭೋಗ ಇತ್ಯಾದಿ) ಇಂಥವನ್ನು ತಡೆಗಟ್ಟಬೇಕಾದುದು ಅಗತ್ಯ.*

### ಜನನಾಂಗದ ಗಂತಿಗಳು

ಗಂತಿಗಳು ಜನನಾಂಗಗಳ ಮೇಲೆ ಸಾಮಾನ್ಯವಾಗಿ ಯೋನಿದ್ವಾರವನ್ನು ಸುತ್ತುವರಿದ ನವಿರಾದ ಅಂಗಸತ್ವಗಳ (tissues) ಮೇಲೆ ಅಥವಾ ಯೋನಿಯ ಒಳಗೆ ಉಂಟಾಗುತ್ತವೆ. ಅವು ಒತ್ತೊತ್ತಾಗಿ ಬೆಳೆಯುವ ಸ್ವಭಾವದವಾಗಿದ್ದು ಗಾತ್ರದಲ್ಲಿ ಗುಂಡುಸೂಜಿ ತಲೆಯಿಂದ ಹಿಡಿದು 'ಹೂರೋಸಿನ' ಗಾತ್ರದವರೆಗೆ ಇರುತ್ತವೆ. ವೈರಸ್‌ಗಳಿಂದ ಬರುವ ಇವು ಲೈಂಗಿಕವಾಗಿ ವರ್ಗಾಯಿಸಲ್ಪಡುತ್ತವೆ ಮತ್ತು ಕಣ್ಣಿಗೆ ಬೀಳದಷ್ಟು ಸೂಕ್ಷ್ಮವಾಗಿರಲೂಬಹುದು.

### ಗಾನಕಾಕಲ್ ಅಲ್ಲದ ಜನನಾಂಗದ ಸೋಂಕು

ಲೈಂಗಿಕವಾಗಿ ವರ್ಗಾಯಿಸಲ್ಪಡುವ ಈ ಸೋಂಕು ಗೊನೇರಿಯಾದಷ್ಟೆ ಗಂಭೀರವಾದ ರೋಗ ಮತ್ತು ಅದಕ್ಕಿಂತ ಮೂರು ಪಟ್ಟು ಸಾಮಾನ್ಯವಾಗಿದೆ. ಹೆಚ್ಚಿನ ಪ್ರಕರಣಗಳಲ್ಲಿ ಇದು ಕ್ಲಾಮಿಡಿಯಾ (Chlamydia) ಎಂಬ ಸೂಕ್ಷ್ಮ ಜೀವಿಯಿಂದ ಉಂಟಾಗುತ್ತದೆ. ಕ್ಲಾಮಿಡಿಯಾ ಸೋಂಕಿಗೆ ಒಳಗಾದ ಎಲ್ಲ ಗಂಡಸರಲ್ಲಿ ಮತ್ತು ಕೆಲವು ಹೆಂಗಸರಲ್ಲಿ ಯೂರೆತ್ರ (ಮೂತ್ರ ವಿಸರ್ಜನ ನಾಳ) ಭಾಗದಿಂದ ದ್ರವ ಸೋರಲು ಪ್ರಾರಂಭವಾಗಿ ಒಂದೆರಡು ವಾರಗಳಲ್ಲಿ ಸೋರುವುದು ನಿಲ್ಲುತ್ತದೆ. ದುರ್ದೈವವೆಂದರೆ ಹೆಂಗಸರಲ್ಲಿ ಕ್ಲಾಮಿಡಿಯಾ ಸೋಂಕು ಹೆಚ್ಚಾಗಿ ಯೂರೆತ್ರದಲ್ಲಿ ತಗುಲದೆ ಗರ್ಭಕೋಶದ ಕಂಠದಲ್ಲಿ ತಗುಲುತ್ತದಾಗಿ ರೋಗ ಲಕ್ಷಣಗಳು ಹೊರಕ್ಕೆ ಗೋಚರವಾಗುವುದಿಲ್ಲ. ಆದರೆ ಸೋಂಕು ಮೇಲು ಮೇಲಕ್ಕೆ ಹಬ್ಬಿ ಗರ್ಭಕೋಶಕ್ಕೂ ಆವರಿಸಿ ಕೆಲವು ಸಲ ಅಂಡಾಣುವಾಗಿ ನಾಳಕ್ಕೂ ಹಬ್ಬುತ್ತದೆ. ಇದನ್ನು ಶ್ರೋಣಿ ಕುಹರದ ಉರಿಯೂತ ರೋಗ (ಶ್ರೋ.ಉ.ರೋಗ) ಎನ್ನುತ್ತಾರೆ ಮತ್ತು ಇದಕ್ಕೆ ಚಿಕಿತ್ಸೆ ಮಾಡದಿದ್ದರೆ ಹೆಂಗಸು ಬಂಜೆಯಾಗಬಹುದು.

*STD ರೋಗಗಳ ಚಿಕಿತ್ಸಾಲಯಕ್ಕೆ ಚಿಕಿತ್ಸೆಗೆಂದು ಬಂದ ಪ್ರತಿ ಐವರು ಗಂಡಸರಲ್ಲಿ ಒಬ್ಬನಿಗೆ ಮತ್ತು ಪ್ರತಿ ಇಬ್ಬರು ಮಹಿಳಾ ಲೈಂಗಿಕ ಕಸುಬುಗಾರ್ತಿಯರಲ್ಲಿ ಒಬ್ಬಾಕೆಗೆ HIV ತಗುಲಿದ್ದುದು ಕಂಡುಬಂದಿದೆ.*

ಲೈಂಗಿಕ ಕ್ರಿಯೆ ಸುರಕ್ಷಿತವಾಗಿ ನಡೆಸಿದರೆ ಕ್ಲಾಮಿಡಿಯಾ ಸೋಂಕನ್ನು ಹತೋಟಿಯಲ್ಲಿಡಬಹುದು. ಅಂದರೆ ಒಬ್ಬರಿಗಿಂತ ಹೆಚ್ಚು ಜನ ಲೈಂಗಿಕ ಸಂಗಾತಿಗಳನ್ನು ಹೊಂದಬಾರದು ಮತ್ತು ಸಂಗಾತಿಯ ಲೈಂಗಿಕ ಪೂರ್ವಾಪರ ವಿಚಾರ ಗೊತ್ತಿಲ್ಲದಿದ್ದಾಗ ಅವನು ಕಾಂಡೋಮ್ ಬಳಸಬೇಕೆಂದು ಒತ್ತಾಯಿಸಬೇಕು.

ಈಗ ಕ್ಲಾಮಿಡಿಯಾ ಪರೀಕ್ಷೆ ನಡೆಸುವುದು ಸಾಧ್ಯವಿದೆ ಮತ್ತು ಒಮ್ಮೆ ರೋಗ ವಿಶ್ಲೇಷಣೆ ಆಯಿತೆಂದಾಗ ಪ್ರತಿಜೈವಿಕ (antibiotics) ಗಳಿಂದ ಖಾತರಿಯಾಗಿ ಗುಣಕಾರಿ ಚಿಕಿತ್ಸೆ ನೀಡಬಹುದು.

### ಗೋನೇರಿಯಾ

ಗೊನೇರಿಯಾ ಗಂಡಸರಿಗಿಂತಲೂ ಹೆಂಗಸರಿಗೆ ಹೆಚ್ಚು ಅಹಿತಕಾರಿಯಾಗಿದೆ. ಈ ರೋಗ ತಗುಲಿದರೆ ಹೆಂಗಸಿನ ಯೋನಿದ್ವಾರದ ಬಾರ್ಥೋಲಿಸ್ ಗ್ರಂಥಿಗೆ ಸೋಂಕು ಉಂಟಾಗಿ ಊದಿಕೊಂಡು ಕೀವುಗಾಯವಾಗುತ್ತದೆ. ಒಂದೊಂದು ಸಾರಿ ಗಾನಕಾಕಸ್ ರೋಗಾಣುಗಳು ಮೇಲೆ ಮೇಲೆ ಹೋಗಿ ಗರ್ಭಾಶಯವನ್ನು ಹೊಕ್ಕು ಅಂಡಾಣುನಾಳಗಳಿಗೂ ಸೋಂಕು ಉಂಟಾಗುತ್ತದೆ. ಮುಟ್ಟಾಗಿದ್ದಾಗ ಸಾಮಾನ್ಯವಾಗಿ ಹೀಗಾಗುತ್ತದೆ. ಸಾಲ್ಪಿನ್‌ಜೈಟಿಸ್ (salpingitis) ಎಂದು ಕರೆಯುವ ಅಂಡಾಣು ನಾಳದ ಈ ಸೋಂಕಿನಿಂದ ಅಂಡಾಣು ನಾಳ ಕೀವು ತುಂಬಿ ಊದಿಕೊಂಡು ಅತೀವ ನೋವು ಕೊಡುತ್ತದೆ. ದುರದೃಷ್ಟವಶಾತ್ ತಕ್ಷಣವೇ ಚಿಕಿತ್ಸೆ ದೊರೆಯದಿದ್ದರೆ ಅಂಡಾಣು ನಾಳ ಹಿಂತಿರುಚಿ ಕಟ್ಟಿಕೊಂಡಂತಾಗಿ, ಗರ್ಭಧರಿಸುವ ಸಾಧ್ಯತೆ ಎಂದೆಂದಿಗೂ ಇಲ್ಲವಾಗುತ್ತದೆ.

ಸುದೈವದಿಂದ ಗೊನೇರಿಯಾಕ್ಕೆ ಪರಿಣಾಮಕಾರಿ ಚಿಕಿತ್ಸೆ ನೀಡಿ ವಾಸಿ ಮಾಡಬಹುದು. ಆದರೆ ಪ್ರತಿಜೈವಿಕಗಳಿಗೆ ಗಾನಕಾಕಸ್ ಬಲು ಬೇಗ ಪ್ರತಿರೋಧ ಬೆಳೆಸಿಕೊಳ್ಳುತ್ತದಾಗಿ ರೋಗಿ ರೋಗದ ಪ್ರಾರಂಭದಲ್ಲೆ ಚಿಕಿತ್ಸೆಗೆ ಒಳಗಾಗಬೇಕಾದುದು ಅಗತ್ಯ. ಚಿಕಿತ್ಸೆಯೂ ವರ್ಷದಿಂದ ವರ್ಷಕ್ಕೆ ಬದಲಾವಣೆಯಾಗುತ್ತದೆ.

ಅಲ್ಪ ಕಾಲಾವಧಿಯಲ್ಲಿ ಮೂರು ಅಥವಾ ಅದಕ್ಕಿಂತ ಹೆಚ್ಚು ಗಂಡಸರೊಂದಿಗೆ ಲೈಂಗಿಕ ಕ್ರಿಯೆ ನಡೆಸಿದ ಹೆಂಗಸು ಸ್ಮಿಯರ್ (smear ಜಬುರು) ತೆಗೆದಿಟ್ಟು ಪರೀಕ್ಷೆ ಮಾಡಿಸಿ ಅವರಲ್ಲಿ ಯಾರಿಂದಲೂ ತನಗೆ ಗೊನೇರಿಯಾ ಸೋಂಕು ತಗುಲಿಲ್ಲವೆಂದು ಖಚಿತ ಪಡಿಸಿಕೊಳ್ಳುವುದು ಸೂಕ್ತ, ಏಕೆಂದರೆ ಇಂಥ ಹೆಂಗಸರಿಗೆ 'ಮೌನ ಗೊನೇರಿಯಾ' (silent gonorrhoea) ಬಂದಿರಬಹುದಾದ ಅಪಾಯವಿರುತ್ತದೆ. ಚಿಕ್ಕ ಕಾಟನ್‌ವೂಲ್ ಕಡ್ಡಿಗಳನ್ನು ಬಳಸಿ ಮೂತ್ರನಾಳ (ಯುರೆತ್ರ) ದಿಂದ ಮತ್ತು ಗರ್ಭಕೋಶದ ಕಂಠದಿಂದ ಸ್ಮಿಯರ್‌ಗಳನ್ನು (ಜಬುರುಗಳನ್ನು) ಪಡೆಯಬಹುದು. ಈ ವಿಧಾನದಲ್ಲಿ ನೋವು ಆಗುವುದಿಲ್ಲ.

### ಸಿಫಿಲಿಸ್ (ಪರಂಗಿ ಹುಣ್ಣು)

ಸಿಫಿಲಿಸ್ ರೋಗ ಇನ್ನೂ ಗಂಭೀರವಾದುದು ಮತ್ತು ಹೆಂಗಸಿಗೆ ಈ ರೋಗ ತಗುಲಿರುವುದನ್ನು ಪತ್ತೆ ಹಚ್ಚುವುದು ಬಹಳ ಸಲ ಸಲಭವಲ್ಲ. ಇದರಲ್ಲಿ ಸಾಮಾನ್ಯವಾಗಿ ಯೋನಿಮುಖದ ತುಟಿಯಂಥ ಅಂಚುಗಳ ಮೇಲೆ ಸಣ್ಣ ಹುಣ್ಣು ಕಾಣಿಸಿಕೊಳ್ಳುತ್ತದೆ.

### HIV ಮತ್ತು STD ರೋಗಗಳ ನಂಟು

STD ರೋಗಗಳ ಚಿಕಿತ್ಸಾಲಯಕ್ಕೆ ಚಿಕಿತ್ಸೆಗೆಂದು ಬಂದ ಪ್ರತಿ ಐವರು ಗಂಡಸರಲ್ಲಿ ಒಬ್ಬನಿಗೆ ಮತ್ತು ಪ್ರತಿ ಇಬ್ಬರು ಮಹಿಳಾ ಲೈಂಗಿಕ ಕಸುಬುಗಾರ್ತಿಯರಲ್ಲಿ ಒಬ್ಬಾಕೆಗೆ HIV ತಗುಲಿದ್ದುದು ಕಂಡುಬಂದಿದೆ. ವರದಿಗಳು ಹೇಳುವಂತೆ ಉತ್ತರ ಭಾರತದಲ್ಲಿ HIV ಸೋಂಕು ಕಡಿಮೆಯಿದ್ದರೆ ದಕ್ಷಿಣ ಭಾರತದಲ್ಲಿ ಇದು ಏರಿಕೆಯನ್ನು ತೋರಿಸುತ್ತಿದೆ. STD ರೋಗಗಳಿಗೆ ಚಿಕಿತ್ಸೆ ನೀಡುವುದರಿಂದ HIV ಸೋಂಕಿನ ಹೊಸ ಪ್ರಕರಣಗಳ ಸಂಖ್ಯೆ ತಗ್ಗುತ್ತದೆಂಬುದಕ್ಕೆ ಪುರಾವೆಗಳು ಸಿಗುತ್ತಿವೆ. ಆದರೆ ಇನ್ನೂ ಅಭಿವೃದ್ಧಿಗೊಳ್ಳುತ್ತಿರುವ ದೇಶದಲ್ಲಿ ಲೈಂಗಿಕ ಆರೋಗ್ಯದ ವಿಷಯಕ್ಕೆ ಇರುವ ಆರ್ಥಿಕ ಮತ್ತು ಸಾಂಸ್ಕೃತಿಕ ಅಡ್ಡಿ ಆತಂಕಗಳು ಇನ್ನೂ ನಿವಾರಣೆಯಾಗಿಲ್ಲ.

ಗಾನಾಕಾಕಲ್ ಅಥವಾ ಕ್ಲಾಮಿಡಿಯಾ ಸೋಂಕಿಗೂ HIV ಸೆರೋಪಾಸಿಟವಿಟಗೂ ಸಂಬಂಧವಿರುವುದು ಕಂಡುಬಂದಿದ್ದು, ಇಂಥ ಹೆಂಗಸರಲ್ಲಿ ಲೈಂಗಿಕವಾಗಿ ವರ್ಗಾಯಿಸುವ ರೋಗಕಾರಕಗಳ ನಿವಾರಣೆಗೆ ರೋಗಲಕ್ಷಣಾವಳಿಯನ್ನು (syndrome) ಆಧರಿಸಿ ಪ್ರಯತ್ನಿಸಿದರೆ HIV - ಸೋಂಕು ವರ್ಗಾವಣೆಯ ಅಪಾಯವನ್ನು ತಗ್ಗಿಸಬಹುದು. ಲೈಂಗಿಕ ಕಸುಬುಗಾರ್ತಿಯರಲ್ಲಿ ಕ್ಲಾಮಿಡಿಯಾ ಅಥವಾ ಗೊನೇರಿಯಾದಿಂದ ಉಂಟಾದ ಗರ್ಭಕೋಶದ ಕಂಠದ ಸೋಂಕಿಗೆ ಚಿಕಿತ್ಸೆ ಮಾಡುವುದರಿಂದಾಗುವ ಪರಿಣಾಮಗಳನ್ನು ಗೈಸ್ (Ghys) ಮೊದಲಾದವರು ತೋರಿಸಿಕೊಟ್ಟಿದ್ದಾರೆ, ಗರ್ಭಕೋಶ-ಯೋನಿಗಳ ಶೆಡ್ಡಿಂಗ್ (shedding) ಮೇಲೆ (ಇದನ್ನು ಯೋನಿಯನ್ನು ತೊಳೆದು ಸಂಗ್ರಹಿಸಿದ್ದು) ಗರ್ಭಕೋಶ ಕಂಠದ ಸೋಂಕಿನಿಂದಾಗುವ ಪರಿಣಾಮವನ್ನು ಅವರು ತೋರಿಸಿದ್ದಾರೆ. HIV ಸೆರೋಪಾಸಿಟಿವ್ ಇರುವ ಹೆಂಗಸರಲ್ಲಿ ಸಿಫಿಲಿಸ್ ರೋಗ ಇರುವುದು ಅತಿ ಹೆಚ್ಚು. ಸಿಫಿಲಿಸ್ ಅಥವಾ ಬೇರೆ ಹುಣ್ಣಿನ ರೋಗಗಳಿಂದ ಈ ಮುಂಚೆ ಸೋಂಕು ಇದ್ದರೆ ಆಗ HIV ತಗುಲುವುದು ಮತ್ತು ಅದು ವರ್ಗಾವಣೆಯಾಗುವುದು ಜಾಸ್ತಿ ಇರುತ್ತದೆಂಬುದು ಕಂಡು ಬಂದಿದೆ. 1995 ರಿಂದ ಮುಂದಿನ 4 ವರ್ಷಗಳಲ್ಲಿ ಜನನಾಂಗ ದ್ವಾರದ ಸೋಂಕು ಇರುವುದು ವೈದ್ಯಕೀಯ ವಿಶ್ಲೇಷಣೆಯಿಂದ ಗೊತ್ತಾಗಿ ಚಿಕಿತ್ಸೆಗೆ ಸೇರಿದ ಹೆಂಗಸರಲ್ಲಿ HIV ಸೆರೋಪಾಸಿಟಿವಿಟಿ 0 ರಿಂದ 6.7% ಕ್ಕೆ ಏರಿಕೆಯಾಗಿರುವುದನ್ನು ಸ್ಯಾಫ್ರಿನ್ (Safrin) ಮತ್ತು ಆತನ ಸಹೋದ್ಯೋಗಿಗಳು ತೋರಿಸಿಕೊಟ್ಟಿದ್ದಾರೆ.

ಲೈಂಗಿಕವಾಗಿ ವರ್ಗಾಯಿಸುವ ರೋಗಗಳ (STD) ನಿರ್ಮೂಲನೆ ಸಾಧ್ಯವಾಗಬೇಕಾದರೆ ಪ್ರತಿಯೊಬ್ಬರೂ ಒಬ್ಬರೊಂದಿಗೆ ಮಾತ್ರ ಲೈಂಗಿಕ ಸಂಪರ್ಕ ಇಟ್ಟುಕೊಂಡಿದ್ದಾಗ ಮಾತ್ರ ಸಾಧ್ಯ. ದಂಪತಿಯಲ್ಲಿಯಾರೊಬ್ಬರು ಅನೇಕರೊಂದಿಗೆ ಲೈಂಗಿಕ ಸಂಪರ್ಕ ಇಟ್ಟುಕೊಂಡಿದ್ದರೆ ಅಥವಾ ಹಿಂದೆ ಹಾಗೆ ಮಾಡಿದ್ದರೆ ಲೈಂ.ವ.ರೋಗಗಳು ತಗುಲುವ ಸಾಧ್ಯತೆ ಹೆಚ್ಚುತ್ತದೆ. ಆದರೆ ಅನೇಕ ಜನ ಇಂಥ ಲೈಂಗಿಕ ವರ್ತನೆಯನ್ನು ಬಿಡುವುದಿಲ್ಲವಾಗಿ ಲೈಂ.ವ.ರೋಗಗಳು ಹಬ್ಬುವುದು ನಿಲ್ಲುವುದಿಲ್ಲ. ಈ ಹಬ್ಬುವಿಕೆಯನ್ನು ತಗ್ಗಿಸಬಹುದಾದ ಮಾರ್ಗಗಳಲ್ಲಿ ಪ್ರತಿ ಸಾರಿ ಮೈಥುನ ಕ್ರಿಯೆ ನಡೆಸುವಾಗಲೂ ಮತ್ತು ಮೈಥುನ ಕ್ರಿಯೆಯಲ್ಲಿ ತೊಡಗುವ ಗಂಡು ಹೆಣ್ಣುಗಳಲ್ಲಿ ಪರಸ್ಪರರಿಗೆ ಯಾರೊಬ್ಬರ ಲೈಂಗಿಕ ಅಭ್ಯಾಸಗಳ ಬಗ್ಗೆ ಖಚಿತವಾಗಿ ಗೊತ್ತಿಲ್ಲದಿದ್ದಾಗ ಗಂಡಸು ಕಾಂಡೋಮ್ ಬಳಸಬೇಕಾದುದು ಒಂದು.

**STD ರೋಗಗಳನ್ನು ಕುರಿತ ಆರೋಗ್ಯ ಶಿಕ್ಷಣ ಸಂದೇಶಗಳು.**

ನಿಮಗೆ ಲೈಂ.ವ. ರೋಗ ತಗುಲಿದೆಯೋ ಎಂಬ ಭಾವನೆಯಿದ್ದರೆ ನೀವೇನು ಮಾಡಬೇಕು?

ಭೀತರಾಗಬೇಡಿ ಅಥವಾ ಸಂಕೋಚಪಡಬೇಡಿ

- ಅರ್ಹತೆ ಪಡೆದ ವೈದ್ಯರಿಂದ ಸಲಹೆ ಪಡೆಯಿರಿ

*ತಡೆಗಟ್ಟುವ ತಂತ್ರಗಳು ಪರಸ್ಪರ ಸಾಹಚರ್ಯದಲ್ಲಿ ನಿಷ್ಠೆ ಮತ್ತು ಸುರಕ್ಷಿತ ಲೈಂಗಿಕ ಅಭ್ಯಾಸಗಳ ಮೇಲೆ ಲಕ್ಷ್ಯ ಕೇಂದ್ರೀಕರಿಸುತ್ತವೆ. ಆದೇನಿದ್ದರೂ ಈ ಕ್ರಮಗಳೆಲ್ಲ ಹೆಂಗಸರಿಗೆ ಸ್ವಯಂ ರಕ್ಷಣೆಗೆ ಸಾಕಷ್ಟು ಸಾಧನಗಳನ್ನು ಒದಗಿಸದ ಗಂಡಸರನ್ನು ಉದ್ದೇಶಿಸಿ ನಡೆಯಬೇಕು.*



• HIV ಒಂದನ್ನು ಬಿಟ್ಟರೆ ಸಾಮಾನ್ಯವಾಗಿ ಎಲ್ಲ ಲೈಂ.ವ. ರೋಗಗಳು ಸಕಾಲದಲ್ಲಿ ಚಿಕಿತ್ಸೆಯಿಂದ ಗುಣವಾಗುತ್ತದೆಂದು ನೆನಪಿರಲಿ.

• ನಿಮ್ಮ ಲೈಂಗಿಕ ಸಂಗಾತಿಗೆ /ಸಂಗಾತಿಗಳಿಗೆ ನಿಮ್ಮ ಭಾವನೆಯನ್ನು ತಿಳಿಸಿ ಅವರಲ್ಲಿ ರೋಗಲಕ್ಷಣಗಳು ತೋರಿಬರದಿದ್ದರೂ ವೈದ್ಯರನ್ನು ಕಾಣಬೇಕೆಂದು ಒತ್ತಾಯಿಸಿ.

• ಮೈಥುನ ಕ್ರಿಯೆ ನಡೆಸಿದರೆ ಅಪಾಯವಿಲ್ಲ ಎಂದು ವೈದ್ಯರು ಹೇಳುವವರೆಗೆ ಮೈಥುನ ಕ್ರಿಯೆ ನಡೆಸಬೇಡಿ.

• ಸ್ವಯಂ ನಿರ್ಧಾರದ ಔಷಧಿ ಮಾಡಿಕೊಳ್ಳಬೇಡಿ. ಅದು ಪರಿಣಾಮಕಾರಿಯಾಗಿರಬಹುದು, ಆದರೆ ಅಪಾಯಕಾರಿಯೂ ಆದೀತು.

**ನಾನೇ ತಡೆಗಟ್ಟುವುದು ಹೇಗೆ?**

• ಪರಸ್ಪರ ನಿಷ್ಠರಾಗಿರುವವರೊಂದಿಗೆ ಮಾತ್ರ ಲೈಂಗಿಕ ಸಂಪರ್ಕ ಮಾಡುವುದು ಅತ್ಯಂತ ಸರಳ ಮಾರ್ಗ

• ಶೌಚಾಲಯಗಳಿಂದ, ಮೂತ್ರಾಲಯಗಳಿಂದ, ಮೇಲು ಹಾಸಿಗೆಗಳಿಂದ, ಟವೆಲ್‌ಗಳಿಂದ ಅಥವಾ ತೊಡುವ ಬಟ್ಟೆಬರೆಗಳಿಂದ ಲೈಂ.ವ.ರೋಗಗಳು ತಗುಲುವುದಿಲ್ಲ.

• ಗರ್ಭನಿರೋಧಕಗಳಾದ (ಕುಟುಂಬ ಯೋಜನೆ ವಿಧಾನಗಳಾದ) ಲೂಪ್‌ಗಳು, ಮಾತ್ರೆಗಳು ಅಥವಾ ಶಸ್ತ್ರ ಚಿಕಿತ್ಸೆಗಳಿಂದ ಲೈಂ.ವ.ರೋಗಗಳನ್ನು ತಡೆಗಟ್ಟಲು ಸಾಧ್ಯವಿಲ್ಲ.

• ಸರಿಯಾದ ಔಷಧೋಪಚಾರದ ಹೊರತು ಕನ್ಯಾ ಸಂಭೋಗದಿಂದಾಗಲಿ ಅಥವಾ ಬೇರೆ ಇನ್ನಾವುದೇ ಮಾರ್ಗದಿಂದಾಗಲೀ ಲೈಂ.ವ. ರೋಗಗಳು ಗುಣವಾಗುವುದಿಲ್ಲ.

• ನಿರೋಧ್‌ನಂತಹ ಕಾಂಡೋಮ್‌ಗಳನ್ನು ಬಳಸುವುದರಿಂದ ಲೈಂ.ವ.ರೋಗಗಳನ್ನು ಬೇರೆಯವರಿಗೆ ವರ್ಗಾಯಿಸುವ ಅಪಾಯ ತಗ್ಗಿಸಬಹುದು.

**ತಡೆಗಟ್ಟುವ ತಂತ್ರಗಳು – ಪ್ರಾಥಮಿಕ ಗುರಿಗಳು**

ಬಹುತೇಕ ಹೆಂಗಸರಿಗೆ ಸೋಂಕು ತಗುಲುವ ಅಪಾಯ ಇರುವುದು ಲೈಂಗಿಕ ಕ್ರಿಯೆಯ ಮೂಲಕವೇ. ತಡೆಗಟ್ಟುವ ತಂತ್ರಗಳು ಪರಸ್ಪರ ಸಾಹಚರ್ಯದಲ್ಲಿ ನಿಷ್ಠತೆ ಮತ್ತು ಸುರಕ್ಷಿತ ಲೈಂಗಿಕ ಅಭ್ಯಾಸಗಳ ಮೇಲೆ ಲಕ್ಷ್ಯ ಕೇಂದ್ರೀಕರಿಸುತ್ತವೆ. ಅದೇನಿದ್ದರೂ ಈ ಕ್ರಮಗಳೆಲ್ಲ ಹೆಂಗಸರಿಗೆ ಸ್ವಯಂ ರಕ್ಷಣೆಗೆ ಸಾಕಷ್ಟು ಸಾಧನಗಳನ್ನು ಒದಗಿಸದ ಗಂಡಸರನ್ನು ಉದ್ದೇಶಿಸಿ ನಡೆಯಬೇಕು.

ಲೈಂಗಿಕ ಸಂಗಾತಿಗಳ ಸಂಖ್ಯೆಯನ್ನು ಕಡಿಮೆ ಮಾಡಿಕೊಳ್ಳಬೇಕೆಂಬ ಮಾತು ಸಾಮಾನ್ಯವಾಗಿ ತಮ್ಮ ಗಂಡಂದಿರೊಂದಿಗೆ ಅಥವಾ ಕ್ರಮಬದ್ಧ ಸಂಗಾತಿಗಳೊಂದಿಗೆ ಸಂಬಂಧವಿಟ್ಟುಕೊಂಡಿರುವ ಹೆಂಗಸರ ವಿಷಯಕ್ಕೆ ಪ್ರಸ್ತುತವಲ್ಲ. ಆರ್ಥಿಕ ಅಗತ್ಯಗಳ ಒತ್ತಡಕ್ಕೆ ಸಿಲುಕಿ ಅವರು ಹೆಚ್ಚು ಜನ ಗಂಡಸರನ್ನು ಸಂಗಾತಿಗಳಾಗಿ ಒಪ್ಪಿಕೊಂಡಿರಬಹುದು. ಆರ್ಥಿಕ ಸ್ವಾತಂತ್ರ್ಯದ ಅವಕಾಶಗಳಿಗೆ ಇತಿಮಿತಿ ಹೇರುವ ಸಾಮಾಜಿಕ-ಆರ್ಥಿಕ ವ್ಯವಸ್ಥೆಯೂ ಈ ತಂತ್ರವನ್ನು ಅಳವಡಿಸುವುದಕ್ಕೆ ಅಡ್ಡಿಯುಂಟುಮಾಡುತ್ತದೆ.

ಮುಖ್ಯವಾದ ಸುರಕ್ಷಿತ ಮುನ್ನೆಚ್ಚರಿಕೆ ಕ್ರಮಗಳಲ್ಲಿ ಕಾಂಡೋಮ್‌ಗಳ ಬಳಕೆಯೂ ಒಂದು. ಅದೇನಿದ್ದರೂ, ಅವುಗಳನ್ನು ಬಳಸುವವರು ಗಂಡಸರು ; ಕಾಂಡೋಮ್ ಬಳಸಿ ಎಂದು ಹೆಂಗಸರು ಕೇಳಬಹುದು ಅಷ್ಟೆ. ಆದರೆ ಅದರ ಬಳಕೆಯನ್ನು ಖಚಿತಪಡಿಸಿಕೊಳ್ಳುವ, ಸಂಗಾತಿಯ ವರ್ತನೆಯ ಮೇಲೆ ಪ್ರಭಾವ ಬೀರುವ ಅಥವಾ ಸಂಧಾನ ಮಾಡಿ ಸಂಯಮಕ್ಕಾಗಿ ತೀರ್ಮಾನಿಸುವ ಶಕ್ತಿ ಹೆಂಗಸರಿಗೆ ಇಲ್ಲ.

ಜನನಾಂಗಗಳ ಮೇಲೆ ಇರುವ ಹುಣ್ಣುಗಳು (ಇವುಗಳನ್ನು ಜನನಾಂಗದ ಹುಣ್ಣಿನ ರೋಗ - genital ulcer disease, ಸಂಕ್ಷಿಪ್ತವಾಗಿ GUDs ಎನ್ನುತ್ತಾರೆ) ಚಾಂಕ್ರಾಯಿಡ್ (chanchroid), ಹರ್ಪಿಸ್ ಪ್ರೊಜೆನಿಟೇಲಿಸ್ (progenitalis) ಸಿಫಿಲಿಸ್ (syphlis), ಗ್ರಾನುಲೋಮಾ ಇಂಗಿನೇಲ್ (granuloma ingeinale) ಮತ್ತು ಲಿಂಫೋಗ್ರಾನುಲೋಮಾ ವೆನೆರಿಯಮ್ (lymphogranuloma venereum) ನ ಕೆಲವು ಪ್ರಕರಣಗಳು ಇವುಗಳಲ್ಲಿ ಕಾಣಿಸಿಕೊಂಡು ಇಂಥ ಹಸಿ ಗಾಯಗಳ ಮೂಲಕ ಶರೀರದ ಒಳಗೆ HIV ಪ್ರವೇಶಕ್ಕೆ ಅನುವು ಮಾಡುತ್ತವೆ. HIV ಸೋಂಕಿರುವ ವ್ಯಕ್ತಿಗಳಲ್ಲಿ ಹುಣ್ಣಿನ ತಾಣಗಳು HIV ಗೆ ಆಶ್ರಯ ತಾಣಗಳಾಗುತ್ತವೆ, ಅದಕ್ಕೆ ಕಾರಣ ಪ್ರತಿರೋಧ ಕೋಶಗಳು (immune cells) ಉರಿಯುವ ಜಾಗಕ್ಕೆ ಆಕರ್ಷಿತವಾಗುತ್ತಾ ಬರುವಾಗ ತಮ್ಮೊಂದಿಗೆ HIV ಯನ್ನೂ ಹೊತ್ತು ತರುತ್ತವೆ. ಇದೇ ರೀತಿ ಜನನಾಂಗದಿಂದ ಸೋರುವಿಕೆಯ ಲಕ್ಷಣಾವಳಿಯಲ್ಲಿ, ಸೋರುವ ದ್ರವದಲ್ಲಿ HIV ಹೆಚ್ಚು ಸಾಂದ್ರವಾಗಿರುತ್ತದೆ. ಲೈಂ.ವ. ರೋಗಗಳಿಗೂ HIV ಗೂ ಇರುವ ನಂಟನ್ನು ಅನೇಕ ಅಧ್ಯಯನಗಳು ಖಾತರಿಯಾಗಿ ತೋರಿಸಿವೆ. ಹುಣ್ಣು ಇರುವ ಮತ್ತು ಹುಣ್ಣು ಇಲ್ಲದಿರುವ ಲೈಂ.ವ. ರೋಗಗಳು HIV ಯ ವರ್ಗಾವಣೆಯೂ ಸಾಮರ್ಥ್ಯವನ್ನು ಹೆಚ್ಚಿಸುತ್ತವೆಂಬುದು ಚೆನ್ನಾಗಿ ತಿಳಿದಿರುವ ವಿಷಯ.

ಲೈಂ.ವ. ರೋಗಗಳ ಚಿಕಿತ್ಸಾಲಯದ ಪರಿಚಾರಕನಿಗೆ/ಳಿಗೆ (attender) ಹಿಂದೆ ಅಥವಾ ಈಗ ಶ್ರೋಣಿ ಕುಹರ ಉರಿಯೂತದ ಕಾಯಿಲೆಯಿದ್ದ ಚರಿತ್ರೆಯಿದ್ದರೆ ಈಗ HIV ಸೋಂಕು ತಗುಲುವ ಅಪಾಯ 8 ಪಟ್ಟು ಅಧಿಕವಾಗುತ್ತದೆ. ಇದೇ ರೀತಿ ಜನನಾಂಗದ ಸೋರುವಿಕೆಯಿಂದ ನರಳಿದವರು ಅಥವಾ ಈಗ ನರಳುತ್ತಿರುವವರು ಈ ಸೋರುವಿಕೆಯಿಲ್ಲದವರಿಗಿಂತ 3.75 ಪಟ್ಟು ಹೆಚ್ಚಾಗಿ ಈಗ HIV ರೋಗ ತಗುಲುವ ಅಪಾಯಕ್ಕೆ ಈಡಾಗುತ್ತಾರೆ.

ಕಡಿಮೆ ಅಪಾಯ ಸಾಧ್ಯತೆಯಿರುವ ಹೆಂಗಸರಲ್ಲಿ ಲೈಂ.ವ.ರೋಗಗಳ / HIV ಯ ಸೋಂಕು ಇದ್ದರೆ ಅದು HIV ಮೂರನೆ ಹಂತದ ಸಾಂಕ್ರಾಮಿಕವಾಗಿರುವುದನ್ನು ತೋರಿಸುತ್ತದೆ.

ಇಂಥ ಹೆಂಗಸರಲ್ಲಿ ಹೆಚ್ಚಿನ ಪಾಲಿನವರು ವಿವಾಹಿತರಾಗಿದ್ದು ತಮ್ಮ ಗಂಡನೊಂದಿಗೆ ಮಾತ್ರ ಲೈಂಗಿಕ ಸಂಬಂಧವುಳ್ಳವರಾಗಿದ್ದವರೆಂದು ತಿಳಿದುಬರುತ್ತದೆ.

ಇದನ್ನೆಲ್ಲ ಪರಿಗಣಿಸಿದಾಗ, ಲೈಂ.ವ.ರೋಗಗಳನ್ನು ತಡೆಗಟ್ಟಲು ಮತ್ತು ಹತೋಟಿಯಲ್ಲಿಡಲು ಈ ಮುಂದಿನ ಕ್ರಮಗಳನ್ನು ಅನುಸರಿಸಬೇಕಾಗುತ್ತದೆ.

• ಸಂಗಾತಿಗಳನ್ನು ಬದಲಾಯಿಸುವುದನ್ನು ತಗ್ಗಿಸುವುದು.

ಇದರಲ್ಲಿ ವೈಯಕ್ತಿಕ ನೆಲೆಯಲ್ಲಿ ನಡತೆಯಲ್ಲಿನ ಬದಲಾವಣೆ ತರುವುದು ಸೇರುತ್ತದೆ. ಇದರ ತಂತ್ರಗಳೇನೆಂದರೆ : ಅಪಾಯದ ಮಟ್ಟ ಎಷ್ಟಿದೆ ಎಂಬ, ಅದು ಎಷ್ಟು ಗಂಭೀರವಾಗಿದೆಯೆಂಬ ಮತ್ತು ನಡವಳಿಕೆ ತಿದ್ದಿಕೊಳ್ಳಲು ಸ್ವಯಂ-ಸಾಮರ್ಥ್ಯ ಮತ್ತು ಹಿರಿಯರ ಒತ್ತಾಸೆ ಎಷ್ಟಿದೆಯೆಂಬ ತಿಳಿವಳಿಕೆಯ ಮಟ್ಟವನ್ನು ಹೆಚ್ಚಿಸಲು ಲೈಂ.ವ.ರೋಗಗಳ ಚಿಕಿತ್ಸಾಲಯಗಳ ಸಲಹೆ ಪಡೆಯುವುದು, ನಡತೆಗಳನ್ನು ತಿದ್ದಿಕೊಳ್ಳಲು ಅನುವಾಗುವಂಥ ಸನ್ನಿವೇಶ ಸೃಷ್ಟಿಸುವುದು, ವಿದ್ಯುನ್ಮಾನ ಮಾಧ್ಯಮಗಳು ಸೇರಿದಂತೆ ಲಭ್ಯವಿರುವ ಎಲ್ಲ ಸಂವಹನ ಮಾರ್ಗಗಳನ್ನು ಉಪಯೋಗಿಸಿ ಲೈಂ.ವ. ರೋಗಗಳು/ಏಯ್ಡ್ಸ್ ಕುರಿತು ತಿಳಿವಳಿಕೆ ನೀಡಿ ಜಾಗೃತಿ ಹುಟ್ಟಿಸುವುದು, ಅದನ್ನು ಮತ್ತು ಸ್ತ್ರೀರೋಗಗಳ, ಪ್ರಸೂತಿಪೂರ್ವ ಮತ್ತು ಕುಟುಂಬ ಆರೋಗ್ಯ ಇವುಗಳ ಚಿಕಿತ್ಸಾಲಯಗಳೊಂದಿಗೆ ಸಂಯೋಜಿಸುವುದು, ಶಾಲೆಗಳು ಕಾಲೇಜುಗಳು ಇತ್ಯಾದಿ ಮಟ್ಟದಲ್ಲಿ ಲೈಂ.ವ.ರೋಗಗಳ / ಏಯ್ಡ್ಸ್‌ನ ಬಗ್ಗೆಯೂ ತಿಳಿಸಿಕೊಡುವುದು ಸೇರಿದಂತೆ ಕುಟುಂಬ ಜೀವನ ಶಿಕ್ಷಣ ಪ್ರಾರಂಭಿಸುವುದು.

• ರೋಗ ಸಾಗುವ ಸಾಮರ್ಥ್ಯ ತಗ್ಗಿಸುವುದು

ಈ ತಂತ್ರದಲ್ಲಿ ಮುಂದಿನವು ಸೇರುತ್ತವೆ :

• ಸಮುದಾಯಕ್ಕೆ ಮತ್ತು ಲೈಂ.ವ.ರೋಗ ಚಿಕಿತ್ಸಾಲಯಗಳಿಗೆ ಹೋಗಿ ಚಿಕಿತ್ಸೆ ಪಡೆದು ಬರುವ ರೋಗಿಗಳಿಗೆ ಸುರಕ್ಷಿತ ಲೈಂಗಿಕ ಅಭ್ಯಾಸಗಳ ಕುರಿತು ವಿಶೇಷವಾಗಿ ಕಾಂಡೋಮ್ (ನಿರೋಧ್)ಗಳ ಬಳಕೆ ಕುರಿತು ತಿಳಿವಳಿಕೆ ನೀಡುವುದು;

• ಅಪಾಯ ಕುರಿತು ಮುಕ್ತವಾಗಿ ತಿಳಿಸಿ ಹೇಳಿ ತನ್ನ ರೂಢಿಯ ಲೈಂಗಿಕ ಸಂಗಾತಿ ಸುರಕ್ಷಿತ ಲೈಂಗಿಕ ಅಭ್ಯಾಸಗಳನ್ನು ಅನುಸರಿಸಲು ಒತ್ತಾಯಿಸುವುದು ;

• ಮಹಿಳೆಯ ಸಶಕ್ತತೆಯ ಮಟ್ಟವನ್ನು ಏರಿಸುವುದು ;

• ಲೈಂ.ವ.ರೋಗಗಳಿಗೆ ವಿಳಂಬಮಾಡದೆ ಚಿಕಿತ್ಸೆ ಪಡೆಯಲು ಜನರನ್ನು ಪ್ರೋತ್ಸಾಯಿಸುವುದು.

• ಲೈಂ.ವ.ರೋಗಗಳಿಗೆ ಚಿಕಿತ್ಸೆಯ ಅವಕಾಶಗಳನ್ನು ಹೆಚ್ಚಿಸಬೇಕು, ಆದರಿಂದ ಆ ರೋಗಗಳಿಗೆ ವೈಯ್ಯಕ್ತಿಕ ಮಟ್ಟದಲ್ಲಿ ಗೌಣವಾಗಿಯೂ ಮತ್ತು ಜನಸಂಖ್ಯೆ ಮಟ್ಟದಲ್ಲಿ ಪ್ರಧಾನವಾಗಿಯೂ ತಡೆ ಒದಗುತ್ತದೆ.

• ಸರ್ಕಾರಿ ವೈದ್ಯರಿಗೆ ಮತ್ತು ಖಾಸಗಿ ವೈದ್ಯರಿಗೆ ಅಲ್ಲದೆ ಪರಿಣತಿಯಿಲ್ಲದೆ ವೈದ್ಯವೃತ್ತಿ ನಡೆಸುವವರಿಗೂ ಸಹ ಲೈಂ.ವ. ರೋಗಗಳ ಲಕ್ಷಣಾವಳಿಗಳು ಮತ್ತು ನಿರ್ವಹಣೆ ಕುರಿತು ತರಬೇತಿ ನೀಡಬೇಕು.

• ಸಂತಾನೋತ್ಪತ್ತಿ ಆರೋಗ್ಯ ಕಾರ್ಯಕ್ರಮಗಳಲ್ಲಿ ರೋಗ ಲಕ್ಷಣಾವಣೆಗಳನ್ನು ಗಮನಿಸಿ ಆ ಮೂಲಕ ಲೈಂ.ವ.ರೋಗಗಳ ನಿರ್ವಹಣೆಯೊಂದಿಗೆ ಸಂಯೋಜಿಸಿಕೊಳ್ಳಬೇಕು.

ಸ್ತ್ರೀ ರೋಗ ತಜ್ಞರಿಗೆ ತಿಳಿವಳಿಕೆ ಮೂಡಿಸುವಂಥ ಕ್ರಮಗಳಿಂದ ಲೈಂ.ವ.ರೋಗಗಳ ಪತ್ತೆಮಾಡಿ ನಿರ್ವಹಿಸುವ ಸಾಧ್ಯತೆಗಳು ಹೆಚ್ಚಿವೆ. ಆದರೆ, ಜನನಾಂಗಗಳ ಸೋರುವಿಕೆ ಲಕ್ಷಣಾವಳಿಯನ್ನು, ವಿಶೇಷವಾಗಿ ಗೊನೇರಿಯಾ ಮತ್ತು ಕ್ಲಾಮಿಡಿಯಲ್ ಸೋಂಕುಗಳಲ್ಲಿ ಲಕ್ಷಣಾವಳಿಗಳನ್ನು ನೋಡಿ ರೋಗ ವಿಶ್ಲೇಷಣೆ ಮಾಡುವ ಕ್ಷಮತೆ ಇನ್ನೂ ಗರಿಷ್ಠ ಮಟ್ಟಕ್ಕೆ ಏರಿಲ್ಲ ; ಈ ಮಾತು ಲೈಂಗಿಕ ಕಸುಬುದಾರರಾಗಿ ಲೈಂ.ವ.ರೋಗಗಳ ಪ್ರಕರಣಗಳಿರುವವರಿಗೂ ಮತ್ತು ಇನ್ನೂ ಹೆಚ್ಚಾಗಿ ಕುಟುಂಬ ಯೋಜನ ಚಿಕಿತ್ಸಾಲಯಗಳಿಗೆ ಬರುವ ರೋಗ ಸೂಚನೆಯಿರದ ಹೆಂಗಸರಿಗೂ ಅನ್ವಯಿಸುತ್ತದೆ. ಈ ವಿಶ್ಲೇಷಣೆಗಾಗಿ ಅಗತ್ಯವಾದುದೆಂದರೆ ಲ್ಯೂಕೋಸೈಟ್ ಎಸ್ಟರೇಸ್ (Leukoiyte Esterase) ಪರೀಕ್ಷೆ ಅಥವಾ 'ಅಪಾಯದಲ್ಲಿರುವ' ಮಹಿಳೆಯರಲ್ಲಿ ಆರೋಗ್ಯ ವರ್ಧನೆಯ ನಡವಳಿಕೆಗಳಲ್ಲಿ ಸುಧಾರಣೆ ಇವು.

**ರೋಗ ಹರಡುವಿಕೆ ಅವಧಿ ತಗ್ಗಿಸುವುದು**

ರೋಗ ಹರಡುವಿಕೆಯ ಅವಧಿ ತಗ್ಗಿಸುವುದು ಸಾಧ್ಯ ; ಅದಕ್ಕಾಗಿ ಅನುಸರಿಸಬೇಕಾದುದೆಂದರೆ ಆರೋಗ್ಯ ಶಿಕ್ಷಣ, ಲೈಂ.ವ. ರೋಗಗಳ ರೋಗ ಲಕ್ಷಣ ಕಂಡು ಬಂದ ಹಂತದಲ್ಲಿ ಅರಕ್ಷಿತ ಲೈಂಗಿಕ ಕ್ರಿಯೆ ನಡೆಸದೆ ಲೈಂ.ವ. ರೋಗಗಳನ್ನು ಆದಷ್ಟೂ ಬೇಗ ಪತ್ತೆ ಹಚ್ಚುವುದಕ್ಕಾಗಿ ಆರೋಗ್ಯ ರಕ್ಷಣೆ ಮತ್ತು ಚಿಕಿತ್ಸೆ ಪಡೆಯುವ ಅಭ್ಯಾಸವನ್ನು ಬಳೆಸುವುದು ಮತ್ತು ಸಂಗಾತಿಗೆ ಸೂಚನೆ ನೀಡುವುದನ್ನು ಪ್ರೋತ್ಸಾಹಿಸುವುದು. ಸಂಗಾತಿಗಳು ಸೂಕ್ತವಾಗಿ ನಡೆದುಕೊಳ್ಳುವುದು ಲೈಂ.ವ. ರೋಗಗಳ ಹತೋಟಿಯಲ್ಲಿ ತುಂಬ ಮಹತ್ವದ ಹೆಜ್ಜೆ. ಆದುದರಿಂದ ಸಂಗಾತಿಗೆ ಸೂಚನೆ ನೀಡುವ ನೀತಿಯನ್ನು ತುರ್ತಾಗಿ ರೂಪಿಸಬೇಕಾದುದು ಅತ್ಯಗತ್ಯವಾಗಿದ್ದು ಆರೋಗ್ಯ ಕಾರ್ಯಕರ್ತರಿಗೂ ಅಂಥ ನೀತಿಯ ಬಗ್ಗೆ ಅರಿವು ಮೂಡಿಸತಕ್ಕದ್ದು. ಲೈಂ.ವ. ರೋಗಗಳಿಗೆ ಚಿಕಿತ್ಸೆ ನಡೆಸಿದರೆ ಅವುಗಳ ಮತ್ತು HIV ಯ ಹರಡಿವಿಕೆಯನ್ನು ತಗ್ಗಿಸಬಹುದು. ಪ್ರಾಥಮಿಕ ಆರೋಗ್ಯ ರಕ್ಷಣೆಯಲ್ಲಿ ಲೈಂ.ವ. ರೋಗಗಳ ನಿರ್ವಹಣೆ ಅತ್ಯಂತ ಮಹತ್ವ ಪಡೆಯುತ್ತದೆ. ಇದಕ್ಕಾಗಿ ಇರುವ ಪರ್ಯಾಯ ಮಾರ್ಗಗಳಲ್ಲಿ ಲಕ್ಷಣಾವಳಿಗಳನ್ನು ಆಧರಿಸಿದ

***ಸ್ತ್ರೀ ರೋಗ ತಜ್ಞರಿಗೆ ತಿಳಿವಳಿಕೆ ಮೂಡಿಸುವಂಥ ಕ್ರಮಗಳಿಂದ ಲೈಂ.ವ.ರೋಗಗಳ ಪತ್ತೆಮಾಡಿ ನಿರ್ವಹಿಸುವ ಸಾಧ್ಯತೆಗಳು ಹೆಚ್ಚಿವೆ.***

ಮಾರ್ಗ ಕಾರ್ಯಸಾಧ್ಯವೂ ಮತ್ತು ಪರಿಣಾಮಕಾರಿಯೂ ಆದ ಮಾರ್ಗ. ಸರ್ಕಾರಿ ವಲಯದಿಂದ ಮತ್ತು ಸರ್ಕಾರೇತರ ಸಂಘಟನೆ (NGO) ಗಳಿಂದ ಸಲಹೆಗಾರರನ್ನು ತರಬೇತಿಗೊಳಿಸುವುದಕ್ಕೆ ತುರ್ತು ಗಮನ ನೀಡಬೇಕಾಗಿದೆ. ತರಬೇತಿ ಪಡೆದ ಸರ್ಕಾರೇತರ ಸಂಘಟನೆಗಳ ಸಲಹಾಗಾರರು ಖಾಸಗೀ ವಲಯದಲ್ಲಿ ತಮ್ಮ ಸೇವೆ ಸಲ್ಲಿಸುವುದನ್ನು ಪ್ರೋತ್ಸಾಹಿಸಬೇಕು.

**ಉಪಸಂಹಾರ**

ಇತ್ತೀಚಿನ ಪುರಾವೆಗಳು ಗರ್ಭಿಣಿಯರಲ್ಲಿ ಲೈಂ.ವ. ರೋಗಗಳ ಪ್ರಮಾಣ ಏರಿಕೆಯಲ್ಲಿರುವುದನ್ನು ಸೂಚಿಸುತ್ತಿದ್ದು, ಭಾರತದಲ್ಲಿ ಅಪಾಯ ಸಾಧ್ಯತೆ ಕಡಿಮೆ ಇರುವ ಜನಸಂಖ್ಯೆಯಲ್ಲಿಯೂ ಇವು ಹರಡುತ್ತಿರುವುದನ್ನು ತೋರಿಸುತ್ತಿದೆ.

ಲೈಂ.ವ.ರೋಗಗಳ ಚಿಕಿತ್ಸಾಲಯಗಳಲ್ಲಿ ತರಬೇತಿ ಪಡೆದ ಸಲಹೆಗಾರರನ್ನು ಆದ್ಯತೆ ನೀಡಿ ನೇಮಿಸುವುದನ್ನು ಪರಿಗಣಿಸತಕ್ಕದ್ದು. ಸಂಗಾತಿಗೆ ಸೂಚನೆ ನೀಡುವ ನೀತಿಯನ್ನೂ ಅತ್ಯಂತ ಜರೂರಾಗಿ ರೂಪಿಸಬೇಕು. ಯೋನಿ ಸಂಬಂಧಿ ಮೈಕ್ರೋಬೈಸೈಡ್ (microbicide) ಸಂಶೋಧನೆಗೆ ಅತ್ಯಂತ ಹೆಚ್ಚಿನ ಆದ್ಯತೆ ನೀಡಬೇಕು. ಲಕ್ಷಣಾವಳಿಗಳನ್ನು ಪರೀಕ್ಷಿಸುವ ಮತ್ತು ಅಭ್ಯಾಸಗಳ ಬದಲಾವಣೆ ತರುವ ಮಾರ್ಗವನ್ನು ಅನುಸರಿಸಿ ಲೈಂ.ವ. ರೋಗಗಳನ್ನು ಪರಿಣಾಮಕಾರಿಯಾಗಿ ಹತೋಟಿಯಲ್ಲಿಡುವುದು ಸಾಧ್ಯ.

ಮಾನವರಲ್ಲಿ ರೋಗ ಪ್ರತಿರಕ್ಷಾ ಕೊರತೆ ವೈರಸ್ (HIV) ಕುರಿತಂತೆ ಅರಿವು ಮತ್ತು ಮಾಹಿತಿ ದಿನೇ ದಿನೇ ವಿಸ್ತಾರಗೊಳ್ಳುತ್ತಲಿದ್ದು ಅದರೊಂದಿಗೆ ಸರಿಗಟ್ಟಿ ಹೆಜ್ಜೆ ಹಾಕಬೇಕಾದರೆ ನಮ್ಮ ಎಲ್ಲ ವೈಜ್ಞಾನಿಕ ಮತ್ತು ಸಾಮಾಜಿಕ ಪರಿಗಣೆಗಳು ದಶ ದಿಕ್ಕುಗಳಲ್ಲೂ ಚೈತನ್ಯಶೀಲತೆ ಪಡೆಯಬೇಕಾದುದು ಅತ್ಯಂತ ಆವಶ್ಯಕ.

ವಿವಿಧ ವೃತ್ತಿಗಳಲ್ಲಿರುವ ವೃತ್ತಿಪರರು ಪರಸ್ಪರ ಸೇರಿ ಕಾರ್ಯ ತಂಡವೊಂದನ್ನು ಕಟ್ಟಬೇಕಾದುದು ಜರೂರಾತಿ ಈಗ ಎದ್ದು ಕಾಣುತ್ತಿದೆ. ಒಮ್ಮೆ ಅಂಥ ಕಾರ್ಯ ತಂಡ ಹುಟ್ಟಿಕೊಂಡರೆ ಕ್ರಮೇಣ ಸಮಾನ ಮನಸ್ಕರನ್ನು ಜೊತೆ ಸೇರಿಸಿಕೊಳ್ಳಲು ಸಾಧ್ಯವಾಗುತ್ತದೆ. ನಾವು ಇಂದು ಎದುರಿಸುತ್ತಿರುವ ಸಮಸ್ಯೆ ಅಲ್ಪಾವಧಿಯಲ್ಲಿ ಪರಿಹಾರವಾಗುವಂಥದೂ ಅಲ್ಲ ಮತ್ತು ಸಣ್ಣ ಪುಟ್ಟ ತಂಡ ಕಟ್ಟಿದರೆ ನೀಗುವಂಥದೂ ಅಲ್ಲ ಎಂಬುದು ಸುಸ್ಪಷ್ಟ.

*ಡಾ|| ಹೇಮಾ ದಿವಾಕರ್ ಬೆಂಗಳೂರಿನ ದಿವಾಕರ್ಸ್ ಹಾಸ್ಪಿಟಲ್‌ನಲ್ಲಿ ಸಲಹಾಗಾರ್ತಿ ಪ್ರಸೂತಿ ತಜ್ಞರು ಮತ್ತು ಸ್ತ್ರೀರೋಗತಜ್ಞರು. ಟೈಮ್ಸ್ ಆಫ್ ಇಂಡಿಯಾ ಪತ್ರಿಕೆಯ 'ಬಾಡಿ ಇನ್ ಕ್ವೆಷ್ಚನ್' ಅಂಕಣದಲ್ಲಿ ಅವರು ನಿಯತವಾಗಿ ಬರೆಯುತ್ತಾರೆ.*

*ಅನುವಾದ : ಎನ್. ವಿಶ್ವನಾಥ*

# ಮಕ್ಕಳ ಹಕ್ಕುಗಳ ಒಡಂಬಡಿಕೆ

- ನಂದನಾರೆಡ್ಡಿ




*'ದೊಡ್ಡವರು ಮಕ್ಕಳ ವಿಷಯ ಕುರಿತು ತಮ್ಮಿಂದ ತಾವೇ ಏನನ್ನೂ ಅರ್ಥ ಮಾಡಿಕೊಳ್ಳುವುದಿಲ್ಲ ಮತ್ತು ಈ ಬಗ್ಗೆ ಹಿರಿಯರಿಗೆ ನಿರಂತರವೂ ವಿವರಣೆ ನೀಡುವುದು ಮಕ್ಕಳಿಗೆ ಆಯಾಸಕರ'*

*ದಿ ಲಿಟಲ್ ಪ್ರಿನ್ಸ್ - ಆಂಟೋಯಿನ್ ಡಿ ಎಕ್ಸೂಪೆರಿ*

**ಪರಿಚಯ**

ನನ್ನ ಸ್ನೇಹಿತ ತರುಣ್ ದಿಢೀರನೆ ಒಂದು ಹುಟ್ಟುಹಬ್ಬದ ಸಮಾರಂಭಕ್ಕೆ ಹೋಗಬೇಕಾಯಿತು. ತರುಣನ ಅಮ್ಮ ಅವನ ಗಮನಕ್ಕೆ ಬರುವುದಿಲ್ಲವೆಂದು ಊಹಿಸಿ, ಹಿಂದಿನ ವಾರವಷ್ಟೇ ತರುಣನಿಗೆ ಹುಟ್ಟುಹಬ್ಬಕ್ಕೆ ಬಂದ ಹಲವು ಉಡುಗೊರೆಗಳಲ್ಲಿ ಒಂದನ್ನು ಕೊಡಲು ನಿರ್ಧರಿಸಿದರು. ತರುಣ್ ಆ ಉಡುಗೊರೆ ತನ್ನದೆಂದು, ಅಮ್ಮನ ನಿರ್ಧಾರವನ್ನು ಬಲವಾಗಿ ವಿರೋಧಿಸಿದ. ತರುಣನನ್ನು ಕಡೆಗೂ ಇದಕ್ಕೆ ಒಪ್ಪಿಸಲು ಅವನಮ್ಮ ಅವನೊಂದಿಗೆ ದೀರ್ಘ ಮಾತುಕತೆ ನಡೆಸಬೇಕಾಯಿತು. ತರುಣ್ ಎರಡು ವರ್ಷದ ಬಾಲಕ.

ಜೂಯಿ, ನನ್ನ ತಮ್ಮನ ಮಗಳು ಎರಡು ವರ್ಷದವಳಿದ್ದಾಗಲೇ ತಾವು ಮಾಂಸ ತಿನ್ನುವುದಿಲ್ಲ ಎಂದು ನಿರ್ಧರಿಸಿದಳು. ಇದಕ್ಕೆ ಕಾರಣ ಪ್ರಾಣಿಗಳ ಬಗ್ಗೆ ಅವಳಿಗಿದ್ದ ಅತೀವ ಪ್ರೀತಿ ಮತ್ತು ಅವುಗಳಿಗೆ ನೋವುಂಟಾಗುವುದನ್ನು ಅವಳು ಸಹಿಸದಿರುವುದು ಅವಳ ತಂದೆತಾಯಿಯರ ಯಾವುದೇ ಸಮಾಧಾನಕರ ಮಾತು ಅವಳ ಮನಸ್ಸನ್ನು ಬದಲಿಸಲಾಗಲಿಲ್ಲ. ಕಳೆದ ವರ್ಷ ಜೂಯಿ ನಾಲ್ಕುವರೆ ವರ್ಷದವಳಿದ್ದಾಗ ಕಬ್ಬನ್ ಪಾರ್ಕ್‌ನ್ನು ಉಳಿಸಲು ಮೆರವಣಿಗೆಯಲ್ಲಿ ನಡೆದಳು. ಕಾರಣ ಕೇಳಿದಕ್ಕೆ ಅವಳುತ್ತರ; ತಾನು ಪ್ರೀತಿಸುವ ಪಕ್ಷಿಗಳ ಪರಿಸರವನ್ನು ರಕ್ಷಿಸುವುದು.

ಈ ಎರಡು ಕಥೆಗಳನ್ನು ಸುಂದರ ನಿದರ್ಶನಗಳೆಂದು ತಳ್ಳಿಹಾಕಬಹುದು. ಆದರೆ ಈ ಮಕ್ಕಳು ನಾವು ಸಾಧಾರಣವಾಗಿ ಯಾವ ತಿಳವಳಿಕೆಯನ್ನು ಹೊಂದಿರುವುದಿಲ್ಲವೆಂದು ತಿಳಿದಿರುತ್ತೇವೋ ತಾವು ಆ ತಿಳಿವಳಿಕೆಯಲ್ಲಿ ಸಮರ್ಥರು ಎಂದು ತೋರಿಸಿಕೊಟ್ಟಿದ್ದಾರೆ. ಈ ಎರಡೂ ಮಕ್ಕಳು ತಮ್ಮ ಹಕ್ಕನ್ನು ಸ್ವಭಾವಿಕವಾಗಿ ಚಲಾಯಿಸಿದ್ದಾರೆ. ತನಗೆ ಸೇರಿದ ವಸ್ತುಗಳ ಬಗ್ಗೆ ನಿರ್ಧಾರ ತೆಗೆದುಕೊಳ್ಳಬಹುದೆಂಬ ತನ್ನ ಅಮ್ಮನ ಏಕ ಪಕ್ಷೀಯ ನಿರ್ಧಾರವನ್ನು ತರುಣ್ ವಿರೋಧಿಸಿದ್ದ. ತಾನು ನಂಬಿದ್ದ ನೈತಿಕ ತತ್ತ್ವದ ಆಧಾರದ ಮೇಲೆ ಜೂಯಿ ತನ್ನ ಆಯ್ಕೆಯ ಹಕ್ಕನ್ನು ಪ್ರತಿಪಾದಿಸಿದ್ದಳು ಈ ಇಬ್ಬರು ಮಕ್ಕಳೂ ಹಲವಾರು ಮಕ್ಕಳಂತೆ ಹಿರಿಯರ ನಿರ್ಧಾರದ ಪ್ರಕ್ರಿಯೆಯಲ್ಲಿ ಸಕ್ರಮವಾಗಿ ಭಾಗವಹಿಸಿ, ತಮ್ಮ ಹಕ್ಕನ್ನು ಚಲಾಯಿಸಿದ್ದಾರೆ. ಇದನ್ನು ತಮ್ಮದೇ ವಿಶಿಷ್ಟ ರೀತಿಯಲ್ಲಿ ಪ್ರತಿಪಾದಿಸಿದ್ದಾರೆ ಮತ್ತು ಸಂಘಟಿತ ಕೊಡು ಕೊಳ್ಳುವಿಕೆಯ ಪ್ರಕ್ರಿಯೆಯಲ್ಲಿ ತಮ್ಮ ಪರವಾದವನ್ನು ಕಾಪಾಡಿಕೊಂಡಿದ್ದಾರೆ.

ಭಾಗವಹಿಸುವಿಕೆಯ ಹಕ್ಕು ನಮ್ಮ ಜೀವನದಲ್ಲಿ ನಿರ್ಣಾಯಕ ಅಂಶ ಈ ಹಕ್ಕು ಎಲ್ಲದಕ್ಕೂ ಬುನಾದಿ, ಬಹುಮುಖ್ಯವಾಗಿ ಎಲ್ಲಾ ಹಕ್ಕುಗಳಿಗೂ ಮೂಲಭೂತವಾದುದು. ಈ ಹಕ್ಕನ್ನು ಚಲಾಯಿಸಲಾಗದಿದ್ದಲ್ಲಿ, ಕೇವಲ ಸೇವೆಗಳನ್ನು ಪಡೆದುಕೊಳ್ಳುವವರು ಮಾತ್ರ ಆಗುತ್ತಾರೆ. ಅಂತಹವರು ಕೇವಲ 'ಕೊಡುವ ದಯಾಳುಗಳಿಂದ' ಪಡೆದುಕೊಳ್ಳುವವರಾಗಿ ಅವರ ದೌರ್ಜನ್ಯ ಮತ್ತು ಶೋಷಣೆಗಳಿಗೆ ಬಲಿಪಶುಗಳಾಗುವ ಸಾಧ್ಯತೆಯೂ ಇರುತ್ತದೆ.

ಪ್ರಜಾಪ್ರಭುತ್ವದ ಮೂಲಭೂತ ತತ್ವ ಸಮುದಾಯದ ಎಲ್ಲಾ ಗುಂಪುಗಳು - ಬುಡಕಟ್ಟು ಜನರು, ಮಹಿಳೆಯರು, ಮಕ್ಕಳೂ ಸೇರಿದಂತೆ ಮೂಲೆಗುಂಪಾಗಿರುವ ಎಲ್ಲರ ಭಾಗವಹಿಸುವಿಕೆಯೇ ಆಗಿದೆ. ಅದು ಹಕ್ಕುಗಳನ್ನು ಪಡೆದುಕೊಳ್ಳುವುದು ಮತ್ತು ಅವರ ಹಕ್ಕುಗಳನ್ನು ಕಾಪಾಡಿಕೊಳ್ಳುವಿಕೆಯೂ ಆಗಿದೆ. ನಿಜವಾದ ಪ್ರಜಾಪ್ರಭುತ್ವದಲ್ಲಿ, ಹಕ್ಕುಗಳು ಕೆಲವರ ನಿಯಂತ್ರಣದಲ್ಲಿರುವುದರಿಂದ 'ಕೊಲ್ಲಟ್ಟವು' ಅಲ್ಲ. ಆದರೆ ರಾಜಕೀಯ ಅವಕಾಶದ ಪ್ರತಿಪಾದಿಸುವಿಕೆ ಮಾತ್ರ ಯಾರು ಹಕ್ಕುಗಳನ್ನು ಹೊಂದಿರುತ್ತಾರೋ ಅವರದಾಗಿರುತ್ತದೆ. ಅಂತಹ ಪಾಲ್ಗೊಳ್ಳುವಿಕೆಯ ಅವಕಾಶಗಳನ್ನು ಈಗಾಗಲೇ ಹೊಂದಿರುವಂತಹ ನಮ್ಮಂತಹವರು ಯಾರು ಮೂಲೆ ಗುಂಪಾಗಿರುತ್ತಾರೋ ಅಂತಹವರು ಸಮಾನವಾಗಿ ಮತ್ತು ಸಕ್ರಿಯವಾಗಿ ಇತರರೊಡನೆಯೂ ಭಾಗವಹಿಸುವಂತೆ ಮಾಡಬೇಕು.

ಇಂತಹ ಅವಕಾಶ ಮಕ್ಕಳಿಗೂ ಇದೆ ಎಂಬುದನ್ನು ಮೊತ್ತಮೊದಲ ಬಾರಿಗೆ ಗುರುತಿಸಿದ ಅಂತಾರಾಷ್ಟ್ರೀಯ ಒಡಂಬಡಿಕೆ, ಮಕ್ಕಳ ಹಕ್ಕುಗಳ ಒಡಂಬಡಿಕೆ.




**ಮಕ್ಕಳ ಹಕ್ಕುಗಳ ಒಡಂಬಡಿಕೆ (ಸಿ.ಆರ್.ಸಿ)**

ಮಕ್ಕಳ ಆರೋಗ್ಯಕರ ಬೆಳವಣಿಗೆ ಹಾಗೂ ಅಭಿವೃದ್ಧಿಯ ಬಗ್ಗೆ ಸಮಗ್ರವಾದ ಯೋಜನೆ ನೀಡುವ ವಿಶ್ವ ಸಂಸ್ಥೆಯ ಮಕ್ಕಳ ಹಕ್ಕುಗಳ ಒಡಂಬಡಿಕೆಯನ್ನು ಜಗತ್ತಿನ ಬಹುತೇಕ ರಾಷ್ಟ್ರಗಳು ಒಪ್ಪಿಕೊಂಡಿವೆ. ಇದರಿಂದ ಅಮೇರಿಕಾ ಸಂಯುಕ್ತ ಸಂಸ್ಥಾನ ಮಾತ್ರಾ ಹೊರಗಿರುವುದು ಎದ್ದು ಕಾಣುತ್ತದೆ.

ಜಗತ್ತಿನ ಬಹುತೇಕ ರಾಷ್ಟ್ರಗಳು ಒಡಂಬಡಿಕೆಯನ್ನು ಒಪ್ಪಿಕೊಂಡಿದ್ದು ಮಕ್ಕಳ ಹಕ್ಕುಗಳು ಹಿಂದೆಂದಿಗಿಂತಲೂ ಈಗ ಹೆಚ್ಚಿನ ಪ್ರಾಮುಖ್ಯತೆ ಪಡೆದಿವೆ. ಮಕ್ಕಳ ಪರವಾಗಿ ವಕೀಲಿ ನಡೆಸುವ ಹಲವಾರು ಸಂಸ್ಥೆಗಳ ಮೇಲೆ ಮಕ್ಕಳ ಹಕ್ಕುಗಳ ಒಡಂಬಡಿಕೆ ಪ್ರಬಲವಾದ ಪ್ರಭಾವ ಬೀರಿದೆ.

ಮಕ್ಕಳ ಹಕ್ಕುಗಳ ಒಡಂಬಡಿಕೆಯನ್ನು ಮಾರ್ಗದರ್ಶೀ ತತ್ವಗಳನ್ನಾಗಿ ಒಪ್ಪಿಕೊಳ್ಳುವುದರ ಮೂಲಕ ಈ ಸಂಸ್ಥೆಗಳಲ್ಲಿ ವ್ಯಾಪಕವಾದ ಬದಲಾವಣೆಗಳಾಗಿವೆ. ಕೆಲವೇ ಕೆಲವು ವರ್ಷಗಳ ಹಿಂದೆ ಗಣನೆಗೆ ಬಾರದಿದ್ದ ಎಷ್ಟೋ ಮೌಲ್ಯಗಳು ಮತ್ತು ವಿಚಾರಗಳನ್ನು ಅವರು ಈಗ ಅಂತಾರಾಷ್ಟ್ರೀಯ ಮಟ್ಟದಲ್ಲಿ ಚರ್ಚೆಗೆ ತರುತ್ತಿದ್ದಾರೆ.

ಬಾಲಕಾರ್ಮಿಕ ಪದ್ಧತಿಗೆ ಸಂಬಂಧಿಸಿದಂತೆ ಇದು ಎಂತಹ ಪರಿಣಾಮ ಬೀರಿದೆ ಎಂದು ನೋಡುವುದು ಗಮನಾರ್ಹ. ಸಿ. ಆರ್.ಸಿ. ಯು ಬಾಲಕಾರ್ಮಿಕ ದೃಷ್ಟಿಕೋನದ ಮೇಲೆ ಸಾಕಷ್ಟು ಪ್ರಭಾವ ಬೀರಿದೆ. ಮಕ್ಕಳ ಹಕ್ಕುಗಳ ಒಡಂಬಡಿಕೆಗೆ ಮೂಲಭೂತವಾಗಿರುವುದೇ ಅಲ್ಲದೆ ಒಡಂಬಡಿಕೆಯನ್ನು ಕುರಿತು ಯಾವುದೇ ಅಭಿವ್ಯಕ್ತಿಗೆ ಮತ್ತು ಜಾರಿಕ್ರಿಯೆಗಳಿಗೆ ಈ ಪರಿಚ್ಛೇದ ಮೆರಗು ನೀಡುತ್ತದೆ.

ಈ ಹಿಂದೆ ಇಟ್ಟುಕೊಂಡಿದ್ದ ಮಾಪಕಗಳನ್ನು ತೊರೆದು ಮುಂದಡಿ ಇಡುತ್ತಿರುವ ಈ ಹೊಸ ಬೆಳವಣಿಗೆಯಿಂದ ಸಾಕಷ್ಟು ಮುಖ್ಯ ಪರಿಣಾಮಗಳೂ ಇವೆ. ಉದಾಹರಣೆಗೆ, ಕಳೆದ ನೂರು ವರ್ಷಗಳ ಅಥವಾ ಅದಕ್ಕೂ ಹಿಂದೆ ಹೋಗಿ ನೋಡಿದರೆ ಮಕ್ಕಳನ್ನು ಶ್ರಮದ ಮಾರುಕಟ್ಟೆಯಿಂದ ದೂರವಿಟ್ಟಿರಬೇಕು ಎಂಬ ಚಿಂತನೆ ಕಂಡುಬರುತ್ತದೆ. ಅವರು (ಮಕ್ಕಳು) ದುಡಿಯಬೇಕೆಂದಿದ್ದರೂ ದುಡಿಮೆಯ ಅಗತ್ಯವಿದ್ದರೂ, ವಯಸ್ಕರಿಗಾಗಿ ಉದ್ಯೋಗಗಳನ್ನು ಸಂರಕ್ಷಿಸಲು ಈ ಕ್ರಮವಿತ್ತು. ಇದು ಎಲ್ಲಾ ಕಾರ್ಮಿಕ ಸಂಘಟನೆಗಳ ಮುಂದಾಳತ್ವಕ್ಕೆ ಇದು ಆಧಾರವಾಗಿತ್ತು. ಈಗ ಇದು ಹಿಂದು ಮುಂದಾಗಿದೆ ಮತ್ತು ಈ ಸಂಸ್ಥೆಗಳು, ಈ ತತ್ವವನ್ನೇ ಪ್ರಸ್ತಾಪಿಸಿ ತಮ್ಮ ಮಧ್ಯವಸ್ಥಿಕೆಯು ಮಕ್ಕಳಿಗೆ ಒಳ್ಳೆಯದನ್ನೇ ಮಾಡುತ್ತವೆ ಮತ್ತು ಅವರ ಹಿತಾಸಕ್ತಿಗಳೇ ಪ್ರಾಥಮಿಕ ಉದ್ದೇಶಗಳಾಗಿವೆ ಎನ್ನುತ್ತೇವೆ.

ಮಕ್ಕಳ ಹಕ್ಕುಗಳ ಒಡಂಬಡಿಕೆಯ ಪರಿಚ್ಛೇಧ ಅಂತಾರಾಷ್ಟ್ರೀಯ ಮಟ್ಟದ ಚರ್ಚೆಗಳಲ್ಲಿ ಕ್ರಾಂತಿಯೆಬ್ಬಿಸಿರುವ ಎರಡನೇ 12ನೇ ಪರಿಚ್ಛೇದ - ಮಕ್ಕಳು ತಮ್ಮ ವಯಸ್ಸು ಮತ್ತು ಸಾಮರ್ಥ್ಯವನ್ನು

ಆಧರಿಸಿ ತಮಗೆ ಸಂಬಂಧಿಸಿದ ವಿಷಯಗಳು, ಹಾಗೂ ತಮ್ಮ ಮೇಲೆ ದುಷ್ಪರಿಣಾಮ ಬೀರುವ ವಿಚಾರಗಳ ಬಗ್ಗೆ ಅಭಿಪ್ರಾಯಗಳನ್ನು ಮತ್ತು ಅವರ ದೃಷ್ಟಿಕೋನಗಳನ್ನು ವ್ಯಕ್ತಪಡಿಸುವ ಹಕ್ಕನ್ನು ಮಕ್ಕಳಿಗೆ ಇದು ನೀಡುತ್ತದೆ.

ಹೆಚ್ಚು ಕಡಿಮೆ, ನೇರವಾಗಿ ಮಕ್ಕಳಿಗೆ ಸಂಬಂಧಿಸಿದ ಕಾರ್ಯಕ್ರಮಗಳ ಜಾರಿ ಹೊರತುಪಡಿಸಿ ಉಳಿದ ಯಾವುದಕ್ಕೇ ಆಗಲಿ ಮಕ್ಕಳ ಅಭಿಪ್ರಾಯಗಳನ್ನು ಯಾರೂ ಸ್ವಾಗತಿಸುತ್ತಿಲ್ಲ. ಅದೇನೆ ಇರಲಿ, ವಿಶ್ವದಾದ್ಯಂತ ಮಕ್ಕಳ ಹಕ್ಕುಗಳ ಒಡಂಬಡಿಕೆಯನ್ನು ಅನುಸರಿಸುತ್ತಿರುವ, ಸರ್ಕಾರೇತರ ಸಂಸ್ಥೆಗಳು ಸ್ಥಳೀಯ, ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಟ್ಟದಲ್ಲಿ ಮಕ್ಕಳಿಗೆಭಾಗವಹಿಸಲು ಅವಕಾಶ ನೀಡುವ ಪ್ರಯತ್ನಗಳಲ್ಲಿ ಹೆಚ್ಚಳ ಕಂಡು ಬಂದಿದೆ. ಇದಕ್ಕೆ ಮಿಶ್ರ ಪ್ರತಿಕ್ರಿಯೆಗಳು ಬಂದಿವೆ. ಕೆಲವರು ಇದೊಂದು ವಿಲಕ್ಷಣವಾದ ಆಲೋಚನೆ ಮತ್ತು ಈಗಾಗಲೇ ಮೂಲೆಗೆ ತಳ್ಳಲ್ಪಟ್ಟಿರುವ ಮಕ್ಕಳ ಮೇಲಿರುವ ಹೊರೆಯನ್ನು ಇದಿನ್ನೂ ಹೆಚ್ಚು ಮಾಡುತ್ತದೆ ಎಂದು ವಾದಿಸಿದ್ದಾರೆ. ಇಲ್ಲಿ ಅವರು ಒಂದು ಅಂಶವನ್ನು ಮರೆಯುತ್ತಿದ್ದಾರೆ ಯಾವ ಮಕ್ಕಳು ಅತ್ಯಂತ ಮೂಲೆಗೆ ತಳ್ಳಲ್ಪಟ್ಟಿದ್ದಾರೋ ಅವರಿಗೆ ತಮ್ಮ ಅಭಿಪ್ರಾಯ ವ್ಯಕ್ತಪಡಿಸಲು ಅವರಿಗೆ ಹೆಚ್ಚು ಅಧಿಕಾರವಿದೆ.

ಇತರರು ಈ ದೃಷ್ಟಿಕೋನವನ್ನು ಸ್ವಾಗತಿಸಿ ಮಕ್ಕಳ ಹಕ್ಕುಗಳನ್ನು ನಿಜವಾಗಿಸುವಲ್ಲಿ ಇದೊಂದು ಪ್ರಮುಖ ಬೆಳವಣಿಗೆ ಎಂದು ಗುರುತಿಸಿದ್ದಾರೆ. ಯೂನಿಸೆಫ್‌ನ ಕಾರ್ಯಕಾರಿ ನಿರ್ದೇಶಕರ ವಿಶೇಷ ಸಲಹೆಗಾರರಾಗಿರುವ ಶ್ರೀಮತಿ. ತೆರೆಸಾ ಆಲ್ಬನ್ಸ್ ಜ ಬಾಲಕಾರ್ಮಿಕ ಪದ್ಧತಿ ಕುರಿತು ವಿಚಾರಣೆ ಸಂದರ್ಭದಲ್ಲಿ ಹೀಗೆ ಹೇಳಿದ್ದಾರೆ. '... ತಮ್ಮ ಜೀವನದ ಮೇಲೆ ಪರಿಣಾಮ ಬೀರುವ ತೀರ್ಮಾನಗಳಲ್ಲಿ ಮಕ್ಕಳ ಭಾಗವಹಿಸಬೇಕು ಮತ್ತು ಅವರ ಅಭಿಪ್ರಾಯಗಳಿಗೆ ಮನ್ನಣೆ ಕೊಡಬೇಕು. ಅದನ್ನು ಮಕ್ಕಳ ಹಕ್ಕು ಎಂದು ಒಡಂಬಡಿಕೆಯು ಪರಿಗಣಿಸಿರುವುದರಿಂದ, ಬಾಲಕಾರ್ಮಿಕ ಪದ್ಧತಿಯನ್ನು... ಈ ಸಮಸ್ಯೆಯ ಭೀಕರತೆಯನ್ನು ಅನುಭವಿಸುತ್ತಿರುವ ಮಕ್ಕಳು ಯುವಕರ ಜೊತೆ ಸೇರಿ ಅರ್ಥಮಾಡಿಕೊಂಡು ಮುನ್ನಡೆಯಬೇಕು.

ಯಾರು ದುಡಿದು ತಮ್ಮ ಕೊಡುಗೆಯನ್ನು ನೀಡುತ್ತಿದ್ದಾರೋ ಅವರ ಮಾತುಗಳನ್ನುನಾವು ಕೇಳಬೇಕು ಯಾಕೆಂದರೆ ದೊಡ್ಡವರಿಗೆ ಕಾಣದ ಎಷ್ಟೋ ಉತ್ತರಗಳು ಮಕ್ಕಳಿಗೆ ತಿಳಿದಿರುತ್ತವೆ.

ಒಂದು ತಲೆಮಾರಿನಷ್ಟು ದಾಟಿ ಬಂದಿರುವ ನಾವು ನಮ್ಮ ಮಕ್ಕಳ ಪರವಾಗಿ ಮಾತನಾಡುವ ಹಾಗೂ ಅವರ ಜೀವನದ ಮೇಲೆ ಪ್ರಭಾವ ಬೀರಬಹುದಾದ ವಿಚಾರಗಳ ಬಗ್ಗೆ ಅವರ ಭಾಗವಹಿಸುವಿಕೆ ಹಾಗೂ ಸಹಮತವಿಲ್ಲದೆ ನಿರ್ಧಾರ ಕೈಗೊಳ್ಳುವ ನೈತಿಕ ಹಕ್ಕನ್ನು ಕಳೆದುಕೊಂಡಿದ್ದೇವೆ.




ನಮ್ಮ ಕೆಲಸ ಕಾರ್ಯಗಳತ್ತ ಒಮ್ಮೆ ತಿರುಗಿನೋಡಿದಾಗ, ನಾವು ಕೈಗೊಂಡ ಕ್ರಮಗಳು, ನಿರ್ಧಾರಗಳ ಬಗ್ಗೆ ದುಡಿಯುವ ಮಕ್ಕಳೇಕೆ ಪ್ರಶ್ನಿಸಿ ಸವಾಲು ಹಾಕುತ್ತಿದ್ದಾರೆ ಎಂದು ಅರಿವಾಗುತ್ತಿದೆ.

ಮಕ್ಕಳ ಹಕ್ಕುಗಳನ್ನು ಒಡಂಬಡಿಕೆಯು ಸೇರಿದಂತೆ ಎಲ್ಲ ಕಾನೂನುಗಳು, ನೀತಿಗಳು, ಒಡಂಬಡಿಕೆಗಳು ಕೇವಲ ಪೊಳ್ಳು ಭರವಸೆಗಳು ಎಂದು ಅವರು ಹೇಳುತ್ತಾರೆ. ಅವರು ತಮ್ಮ ಜೀವನವನ್ನು ತಮ್ಮದೇ ಹಿಡಿತಕ್ಕೆ ತೆಗೆದುಕೊಂಡು ಅವರ ಹಕ್ಕುಗಳನ್ನು ಬಳಸಿಕೊಂಡು ಸಂಘಟಿತರಾಗಿ ಈಗಿರುವುದನ್ನು ಬದಲಿಸಲು ನಿರ್ಧರಿಸಿದ್ದಾರೆಂದು ತೋರುತ್ತದೆ. ಕಳೆದ ಕೆಲವು ವರ್ಷಗಳಿಂದೀಚೆಗೆ ನಡೆದಿರುವ ಚರ್ಚೆಗಳಲ್ಲಿ ದುಡಿಯುವ ಮಕ್ಕಳು ಸಕ್ರಿಯ ಪಾಲ್ಗೊಳ್ಳುವಿಕೆ ಶಾಸನಗಳನ್ನು ಮಾಡುವವರು ಮತ್ತು ಕಾರ್ಯಕ್ರಮಗಳನ್ನು ನಿರ್ಮಿಸುವವರ ಮೇಲೆ ಮಗುವಿನ ಹಿತಾಸಕ್ತಿಯ ಹೊಣೆಗಾರಿಕೆಯನ್ನು ತಂದು ಪರಿಚ್ಛೇದ 3ರ ಜಾರಿಗೊಳಿಸುವಿಕೆಯ ಮೇಲೆ ಒತ್ತಡ ಬಿದ್ದಿದೆ.

ಭಾರತದ ಕುಂದಾಪುರದಲ್ಲಿ ನಡೆದ ಮೊಟ್ಟಮೊದಲ ಅಂತಾರಾಷ್ಟ್ರೀಯ ದುಡಿಯುವ ಮಕ್ಕಳ ಸಂಘಟನೆಗಳ ಸಭೆ (1996) ಮತ್ತು ಆ್ಯಮ್‌ಸ್ಟರ್ಡಂನಲ್ಲಿ ನಡೆದ ಬಾಲಕಾರ್ಮಿಕ ಪದ್ಧತಿ ಕುರಿತು ಜಾಗತಿಕ ಸಮ್ಮೇಳನ (1997)ದಲ್ಲಿ ದುಡಿಯುವ ಮಕ್ಕಳ ಸಂಘಟನೆಗಳನ್ನು ಪ್ರತಿನಿಧಿಸುತ್ತಿದ್ದ ಪ್ರತಿನಿಧಿಗಳು ಭಾಗವಹಿಸಿ ಮಕ್ಕಳಿಂದ ಸದಾ ಬರುತ್ತಿದ್ದ ದೂರನ್ನು ಹೇಳಿದರು - ತಮ್ಮನ್ನು ರಕ್ಷಿಸಲು ಮತ್ತು ಸಹಾಯ ಮಾಡಲೆಂದು ವಿನ್ಯಾಸಗೊಳಿಸಿದ ಮಧ್ಯಸ್ಥಿಕೆಗಳು ತಮಗೆ ಒಳಿತನ್ನು ಮಾಡುವುದರ ಬದಲು ಅನಾನುಕೂಲವನ್ನೇ ಮಾಡಿದೆ. ಮತ್ತು ಹಿಂದೆಂದಿಗಿಂತಲೂ




ಹೆಚ್ಚಿನ ಶೋಷಣೆಯಿರುವ ಪರಿಸ್ಥಿತಿಗೆ ಈಗ ನಮ್ಮನ್ನು ದೂಡಲಾಗಿದೆ. ಮಕ್ಕಳ ಬದುಕಿನಲ್ಲಿ ದೊಡ್ಡದಾದ ಹಾಗೂ ಎದ್ದು ಕಾಣುವ ವ್ಯಂಗ್ಯವೆಂದರೆ, ನೇರವಾಗಿ ಸಮಸ್ಯೆಯನ್ನು ಎದುರಿಸುತ್ತಿರುವವರು ಅವರೇ ಆಗಿದ್ದರೂ, ಅವರ ಮೇಲೇ ಹೆಚ್ಚು ದುಷ್ಪರಿಣಾಮ ಬೀರಿದ್ದರೂ, ಶೋಷಣೆಯೊಂದಿಗೆ ಬದುಕುತ್ತಿದ್ದರೂ ಮತ್ತು ದಿನ ನಿತ್ಯದ ಜೀವನದಲ್ಲಿ ಅವರ ಮೇಲೆ ದೌರ್ಜನ್ಯಗಳಾಗುತ್ತಿದ್ದರೂ ಇವುಗಳಿಗೆ ಪರಿಹಾರವನ್ನು ಅಭಿವೃದ್ಧಿ ಪಡಿಸುವಲ್ಲಿ ಮತ್ತು ವಿನ್ಯಾಸಗೊಳಿಸುವಲ್ಲಿ ಅದರಲ್ಲೂ ತಪ್ಪಾಗುವುದರಲ್ಲಿ ಕೂಡ ಅವರ್‍ಯಾರನ್ನೂ ಕನಿಷ್ಠ ಮಟ್ಟದಲ್ಲಿ ಕೂಡಾ ಪರಿಗಣಿಸಲ್ಪಡದೇ ಇರುವುದು.

ಆರು ದೇಶಗಳಲ್ಲಿ ಮಕ್ಕಳ ಭಾಗವಹಿಸುವಿಕೆಯೊಂದಿಗಿನ ತಮ್ಮ ಆಸಕ್ತಿಯುತ ಅಧ್ಯಯನ ತಮ್ಮ ದುಡಿಮೆಯ ಬದುಕಿನಲ್ಲಿ ಮಕ್ಕಳ ದೃಷ್ಟಿಕೋನಗಳು (2) ಎಂಬುದರಲ್ಲಿ ಮಾರ್ಟಿನ್ ವುಡ್ ಕರೆದಿರುವ ಮಕ್ಕಳ ದೃಷ್ಟಿಕೋನಗಳನ್ನು ಪರಿಗಣಿಸಲೇಬೇಕು ಎಂದು ಒತ್ತಾಯಿಸುತ್ತಾರೆ. ಅವರು ಹೇಳುತ್ತಾರೆ ' 'ತಮ್ಮ ಬೆಳವಣಿಗೆಯ ಮೇಲೆ ದುಡಿಮೆ ಹೇಗೆ ಹಾನಿಯನ್ನುಂಟು ಮಾಡುತ್ತದೆ ಎಂದು ಹೇಳಲು ಮಕ್ಕಳೇ ಮುಖ್ಯವಾದ ಸಾಕ್ಷಿಗಳು... ತಮ್ಮ ಸಾಮಾಜಿಕ ಜಗತ್ತಿಗೆ ಸಕ್ರಿಯವಾಗಿ ಕೊಡುಗೆ ನೀಡುವವರು, ತಮ್ಮ ವಾಸ್ತವ ಜೀವನವನ್ನು ಅರ್ಥಪೂರ್ಣಗೊಳಿಸಲು ಪ್ರಯತ್ನಿಸುವವರು, ತಮಗಿರುವ ತೊಡಕುಗಳು ಮತ್ತು ಲಭ್ಯವಿರುವ ಅವಕಾಶಗಳನ್ನು ತಿಳಿಸುವವರು ಅವರೇ. ಮಕ್ಕಳ ದೃಷ್ಟಿಕೋನವನ್ನು ಗಣನೆಗೆ ತೆಗೆದುಕೊಳ್ಳುವುದರಿಂದ, ಅಪಾಯಕಾರಿಯೂ, ಶೋಷಣಾಮಯವೂ ಆದ ಬಾಲಕಾರ್ಮಿಕ ಪದ್ಧತಿ ವಿರೋಧೀ ಹೋರಾಟಗಳಿಗೆ ಯಾವುದೇ ತೊಂದರೆಯಿಲ್ಲ. ಇದು ಮಕ್ಕಳೇ ಕೇಂದ್ರ ಬಿಂದುವಾಗಿರುವ, ಸನ್ನಿವೇಶ ಸೂಕ್ತವಾದ ಮತ್ತು ದುಡಿಯುವ ಮಕ್ಕಳ ಹಿತಾಸಕ್ತಿಯನ್ನೇ ಹೊಂದಿರುವ ಹಲವಾರು ಮಧ್ಯಸ್ಥಿಕೆಗಳ ಕ್ರಮಗಳಿಗೆ ಗಟ್ಟಿಯಾದ ಆರಂಭವನ್ನೇ ನೀಡುತ್ತದೆ''.

ಬಿಲ್‌ಮೇಯರ್‌ನ ವಾದ ಹೀಗಿದೆ,

'ಭಾಗವಹಿಸುವಿಕೆ ಹೆಚ್ಚಾದಂತೆ . ಆಗಬಹುದಾದ ಪರಿಣಾಮಗಳೇನು ಎಂಬುದು ಈಗೀಗ ಅರಿವಾಗುತ್ತಿದೆ. ಯಾರು ಸಾಮಾಜಿಕ ನಿರ್ಧಾರಗಳನ್ನು ಮಾಡುತ್ತಿದ್ದರೋ ಅವರ ಮೇಲೆ ಹೆಚ್ಚಿನ ಹೆಣೆಗಾರಿಕೆಯ ಒತ್ತಡ ಬೀಳುತ್ತಿದ್ದಂತೆ ಬಾಲಕಾರ್ಮಿಕ ಪದ್ಧತಿಯಲ್ಲಿದ್ದ ರಾಜಕೀಯಗಳು, ಬದಲಾಗುತ್ತಿದೆ.

ಮಕ್ಕಳ ಧ್ವನಿ ಮುಕ್ತವಾಗಿದ್ದರೆ, ಸರ್ಕಾರಗಳು, ಅಂತಾರಾಷ್ಟ್ರೀಯ ಗುಂಪುಗಳು ಅಥವಾ ಪ್ರಭಾವೀ ನಾಗರೀಕ ಸಮಾಜ ಗುಂಪುಗಳಿಗೆ, ಮಕ್ಕಳನ್ನು ಪರಿಗಣಿಸದೇ ತಮ್ಮದೇ ಆದ ವಿಚಾರಗಳು, ಕಾರ್ಯಸೂಚಿಗಳು ಮತ್ತು ಹಿತಾಸಕ್ತಿಗಳನ್ನು ಮುಂದಿಡಲು ಸಾಕಷ್ಟು ಅಡ್ಡಿಯಾಗುತ್ತದೆ. ತಮಗೆ ರಕ್ಷಣೆಯ ಭಾವನೆ ನೀಡುವುದರ ಬದಲು ತಮ್ಮ ಹಕ್ಕುಗಳನ್ನು ಮೊಟಕುಗೊಳಿಸುತ್ತದೆ ಮತ್ತು ಇನ್ನೂ ಹೆಚ್ಚು ಕೆಟ್ಟ ಪರಿಸ್ಥಿತಿಗೆ ತಮ್ಮನ್ನು ಇವು ತಳ್ಳುತ್ತವೆ ಎಂದು ಮಕ್ಕಳೇ ಭಾವಿಸುವಾಗ, ಅಂತಹ ರಕ್ಷಣಾತ್ಮಕ ನೀತಿಗಳು ಅಥವಾ ಕಾರ್ಯಕ್ರಮಗಳು ಹೇಗೆ ತಾನೇ ರಕ್ಷಣೆಯ ನಂಬಿಕೆಯನ್ನು ನೀಡುವಂತಹವಾಗುತ್ತವೆ?''

ಭಾರತದಲ್ಲಿ ಮಕ್ಕಳ ಹಕ್ಕುಗಳನ್ನು ರಕ್ಷಿಸುವುದು, ಹೆಚ್ಚಾಗಿ ಮೂಲಭೂತ ಅವಶ್ಯಕತೆಗಳು ಮತ್ತು ಸೇವೆಗಳನ್ನು ನೀಡುವುದರೊಡನೆಯೇ ತಳಕುಹಾಕಿಕೊಂಡಿದ್ದು ಇದನ್ನು ಒದಗಿಸುವ ಜವಾಬ್ದಾರಿ ಸರ್ಕಾರದ್ದೇ ಆಗಿದೆ.

ಎಷ್ಟೋ ಬಾರಿ ಮಗುವಿನ ಯಾವುದಾದರೊಂದು ಹಕ್ಕನ್ನು ರಕ್ಷಿಸುವ ನಮ್ಮ ಉತ್ಸಾಹದಲ್ಲಿ ನಾವು ಇತರ ಹಲವಾರು ಮಕ್ಕಳ ಹಕ್ಕುಗಳನ್ನು ಉಲ್ಲಂಘಿಸಿರುತ್ತೇವೆ.

ಮಕ್ಕಳಿಗಾಗಿ ಏನು ಮಾಡಬೇಕು ಎಂದು ನಿರ್ಧರಿಸುವಾಗ ಮಕ್ಕಳ ಎಲ್ಲ ಅವಶ್ಯಕತೆಗಳನ್ನು ಗಮನದಲ್ಲಿಟ್ಟುಕೊಳ್ಳಬೇಕು ಎಂಬುದು ಸಾಮಾನ್ಯಜ್ಞಾನ. ಹಕ್ಕುಗಳನ್ನು ನಾವೆಷ್ಟೇ ಖಚಿತವಾಗಿ ನಿರೂಪಿಸಿದ್ದರೂ ಅವು ವಾಸ್ತವವಾಗಲೇ ಬೇಕೆಂದೇನಿಲ್ಲ. ಒದಗಿಸುವ 'ಸೇವೆಗಳು' ಪ್ರಕ್ರಿಯೆಗಳ ಜಾರಿ ಹಾಗೂ ಮಕ್ಕಳ ಹಕ್ಕುಗಳ ಒಡಂಬಡಿಕೆಯ ವಿಚಾರಗಳನ್ನು ರಾಷ್ಟ್ರೀಯ ಶಾಸನಗಳನ್ನಾಗಿ ಮಾರ್ಪಡಿಸುವಾಗಲೂ ಈ ಹಕ್ಕುಗಳು ಮಕ್ಕಳನ್ನು ತಲುಪುತ್ತವೆ ಎಂದು ಭರವಸೆ ನೀಡುವುದಿಲ್ಲ. ಈ ಹಕ್ಕುಗಳನ್ನು ಜಾರಿಗೊಳಿಸಲು ಮತ್ತು ಅಂಗೀಕರಿಸಲು ಮಕ್ಕಳೇ ಹಕ್ಕುಗಳ ವಾರಸುದಾರರು ಎಂದು ಪರಿಗಣಿಸುವುದಷ್ಟೇ ಸಾಕಾಗುವುದಿಲ್ಲ. ಈ ಹಕ್ಕುಗಳಿಗಾಗಿ ಒತ್ತಾಯಿಸಲು, ಪಡೆದುಕೊಳ್ಳಲು ಮತ್ತು ಚಲಾಯಿಸಲು ಅವರಿಗೆ ಸಾಧ್ಯವಾಗಬೇಕು. ಹಾಗಾಗಿ,

ಅಧಿಕಾರವನ್ನು ಹಿಡಿದಿರುವ ಎಲ್ಲರೊಂದಿಗೆ ಮಾತುಕತೆಗೆ ಇದು ಅಡ್ಡಿಪಡಿಸುವುದಿಲ್ಲ. ಆದರೆ, ಇದರಿಂದಾಗಿ ತೊಂದರೆಗೆ ಒಳಪಟ್ಟಿರುವ ಗುಂಪಿನವರ ವಯಸ್ಸು ಮತ್ತು ಸಾಮರ್ಥ್ಯಕ್ಕನುಗುಣವಾಗಿ ಪ್ರಕ್ರಿಯೆಗಳಲ್ಲಿ ಭಾಗವಹಿಸಲು ಅವಕಾಶ ನೀಡುತ್ತದೆ.

ಸಂಘಟಿತರಾಗುವ ಮತ್ತು ಭಾಗವಹಿಸುವ ಹಕ್ಕು - ಪರಿಚ್ಛೇದ12 (ತಮ್ಮ ಅಭಿಪ್ರಾಯ ವ್ಯಕ್ತಪಡಿಸಲು ಹಕ್ಕು) ಮತ್ತು ಪರಿಚ್ಛೇದ 15 (ಸಂಘಟಿತರಾಗುವ ಸ್ವಾತಂತ್ರ್ಯ) - ಈ ಎರಡೂ ಮೂಲಭೂತವಾದ ಹಕ್ಕುಗಳು ಮಕ್ಕಳಿಗೂ ಇವೆ ಎಂದು ಮೊಟ್ಟಮೊದಲ ಬಾರಿಗೆ ಮಕ್ಕಳ ಹಕ್ಕುಗಳ ಒಡಂಬಡಿಕೆ ಜಾಗತಿಕವಾಗಿ ಪರಿಗಣಿಸಿದೆ. ಈ ಎರಡೂ ಹಕ್ಕುಗಳನ್ನು ಚಲಾಯಿಸಿದಲ್ಲಿ, ಬೇರೆ ಯಾವುದೇ ಕ್ರಮಗಳಿಗಿಂತಲೂ ಹೆಚ್ಚಾಗಿ ಮಕ್ಕಳ ಹಕ್ಕುಗಳ ಒಡಂಬಡಿಕೆಯಲ್ಲಿ ಉಲ್ಲೇಖಿಸಿರುವ ಉಳಿದ ಎಲ್ಲಾ ಹಕ್ಕುಗಳ ಜಾರಿಗೊಳ್ಳಲ್ಪಡುತ್ತವೆ.

**ಆಮೂಲಾಗ್ರ ಬದಲಾವಣೆಯ ಅವಶ್ಯಕತೆ**

ಈ ಜಗತ್ತಿನ ವಯಸ್ಕರಾದ ನಾವು, ಬಹುಮಟ್ಟಿಗೆ ಮಕ್ಕಳನ್ನು ಅಯ್ಯೋ ಪಾಪ ಎನ್ನುವ ಕರುಣಾಮಯ ದೃಷ್ಟಿಯಿಂದ ನಮ್ಮ ಉಪಚಾರ ಮತ್ತು ರಕ್ಷಣೆಯ ಅವಶ್ಯಕತೆಯಿರುವ ನಿಷ್ಕ್ರಿಯ ಬಲಿಪಶುಗಳು, 'ನಾವು ಕೆಲಸ ಮಾಡಬಹುದಾದ ಯೋಜನೆಯ ಜನ'. ರಾಜಕೀಯಕ್ಕೆ, ಜಾಹೀರಾತಿಗೆ ಮತ್ತು ಕಾರ್ಯಕ್ರಮಗಳಿಗೆ. ಗುರಿಯಾಗಿರುವವರು ಎಂದೇ ನೋಡುತ್ತೇವೆ. ಪುರುಷ ಪ್ರಧಾನ ಮತ್ತು ಪಿತೃಪ್ರಧಾನ ವ್ಯವಸ್ಥೆಯೇ ಪ್ರಬಲವಾಗಿರುವ ಸಮಾಜದಲ್ಲಿ ಮಕ್ಕಳು. 'ತರಬೇತಿಯಲ್ಲಿರುವವರು' ಎಂದೇ ಪರಿಗಣಿಸಲ್ಪಟ್ಟು, ಅವರು ಸಂಪೂರ್ಣ ವ್ಯಕ್ತಿಗಳಲ್ಲಿ ಮತ್ತು ತಮಗೆ ಸಂಬಂಧಿಸಿದ ವಿಷಯಗಳಲ್ಲೂ ಸಹ ತೀರ್ಮಾನಗಳನ್ನು ಕೈಗೊಳ್ಳುವಲ್ಲಿ ಭಾಗವಹಿಸುವಿಕೆಯಿಂದ ಹೊರತಾಗಿರುವವರು.

ಭಾಗವಹಿಸುವಿಕೆಯಿಂದ ಸಮಾಜದ ಎಲ್ಲಾ ವಿಚಾರಗಳಲ್ಲಿ ಚಟುವಟಿಕೆಯಿಂದ ಹಕ್ಕುಗಳ ಸ್ವರೂಪದಲ್ಲಿ ಭಾಗವಹಿಸಲು ಮಕ್ಕಳನ್ನು ಕಾನೂನು ಬದ್ಧ ಸಕ್ರಿಯ ಸಾಮಾಜಿಕ ಪಾತ್ರಧಾರಿಗಳು ಎಂದು ಪರಿಗಣಿಸಿಲ್ಲ. ಭವಿಷ್ಯದಲ್ಲಿ ಬರಬಹುದಾದ ಒಂದು ದಿನದ ವರೆಗೂ ಅವರು ನಾಗರೀಕರೆಂಬ ಸ್ಥಾನಮಾನದಿಂದ ವಂಚಿತರಾಗಿರುವ ಅದೃಷ್ಯ ವ್ಯಕ್ತಿಗಳು.

ಮಕ್ಕಳ ಹಕ್ಕುಗಳನ್ನು ಪರಿಗಣಿಸುವಾಗ, ಸಾಮಾನ್ಯವಾಗಿ, ಶಿಕ್ಷಣ, ಆರೋಗ್ಯ, ರಕ್ಷಣೆ ಮತ್ತು ಪೌಷ್ಟಿಕ ಆಹಾರದಂತಹ ಸಾಮಾಜಿಕ ಸೇವೆಗಳು ಹಾಗೂ ಕಾನೂನು ಬದ್ಧವಾದ ಕುಟುಂಬದ ಹಕ್ಕುಗಳು ಮಕ್ಕಳ ಹಕ್ಕುಗಳೆಲ್ಲವನ್ನೂ ಖಾತರಿ ಮಾಡಿದೆ ಎಂದೇ ಭಾವಿಸುತ್ತೇವೆ.

ಸಾಮಾನ್ಯವಾಗಿ ಮಕ್ಕಳಿಗೆ ರಾಜಕೀಯ ಹಕ್ಕುಗಳು ಇದೆ ಎಂದು ಅಂದುಕೊಳ್ಳುವುದೇ ಇಲ್ಲ. 'ಈ ದೃಷ್ಟಿಕೋನ ವಯಸ್ಕರ ಪ್ರಾಬಲ್ಯ ಮತ್ತು ಅಧಿಕಾರವನ್ನು ಮುಚ್ಚಿಟ್ಟು ಮಕ್ಕಳಿಗಿರುವ ಸಾಮರ್ಥ್ಯವನ್ನು ಸೀಮಿತಗೊಳಿಸಿ, ಈ ಹಕ್ಕುಗಳನ್ನು ರಕ್ಷಿಸುವ ಮತ್ತು ಎತ್ತಿ ಹಿಡಿಯಬೇಕಾಗಿರುವ ಒಟ್ಟು ಸಮಾಜದ ಜವಾಬ್ದಾರಿಯನ್ನು ನಿರ್ಲಕ್ಷಿಸುತ್ತದೆ''

ಅದೇನೇ ಇರಲಿ, ಸಾರ್ವತ್ರಿಕವಾಗಿ ಸಮ್ಮತಿಸಲ್ಪಟ್ಟಿರುವ ಪರಿಕಲ್ಪನೆಯೆಂದರೆ, ಮಗುವಿನ ಸಾಮಾಜಿಕರಣ ಪ್ರಕ್ರಿಯೆಯು ಮಗು ಕೇವಲ ಇತರರೊಂದಿಗೆ ತನ್ನನ್ನು ಗುರುತಿಸಿಕೊಳ್ಳಲು ಪ್ರಯತ್ನಿಸುವುದು ಮಾತ್ರವಲ್ಲ, ಒಟ್ಟಾರೆ ಪರಿಸರದಲ್ಲಿಯೂ ಗುರುತಿಸಿಕೊಳ್ಳುವುದಾಗಿದೆ.

ಇಂತಹ ಪಾರಸ್ಪರಿಕ ಪ್ರಕ್ರಿಯೆಯು ಪ್ರತಿಯೊಬ್ಬರ ಅಭಿವೃದ್ಧಿಯನ್ನು ನಿರ್ಧರಿಸುತ್ತದೆ. ಸಾಮಾಜಿಕರಣ ಪ್ರಕ್ರಿಯೆಯು ಅದೆಷ್ಟು ಉತ್ತಮವಾಗಿರುತ್ತದೋ, ಅಷ್ಟೇ ಉತ್ತಮವಾದ ಜೀವನಾನುಭವವನ್ನು ಅವರು ಪಡೆಯುತ್ತಾರೆ. ಈ ಕಾರಣದಿಂದಾಗಿ, ಮಗುವಿನ ಸಾಮಾಜಿಕರಣ ಪ್ರಕ್ರಿಯೆ ಪ್ರಜ್ಞಾಪೂರ್ವಕವಲ್ಲದ ಅಥವಾ ವಿಮರ್ಶಾತ್ಮಕವಲ್ಲದ, ವಾಸ್ತವಿಕತೆಯಿಂದ ಹೊರತಾಗಿರುವ ಮತ್ತು ಪಿತೃ ಪ್ರಾಬಲ್ಯದ ಮನೋಭಾವನೆಯಿರುವ ವಯಸ್ಕರಿಂದ ನಡೆಸಲ್ಪಡುವ ಪ್ರಕ್ರಿಯೆಯಾಗಲು ಸಾಧ್ಯವಿಲ್ಲ. ಪರಿಸರ ಮಗುವಿನ ಮೇಲೆ ಹೇಗೆ ಪ್ರಭಾವ ಬೀರುತ್ತದೋ ಹಾಗೆಯೇ ಮಗುವೂ ಕೂಡ ಪರಿಸರದ ಮೇಲೆ ಪ್ರಭಾವ ಬೀರಲು ಸಾಧ್ಯ. ವಾಸ್ತವದೊಂದಿಗೆ ಸಂಬಂಧ ಮಹತ್ವವಲ್ಲದ ಹಾಗೂ ಆಲೋಚನೆ ಮತ್ತು ಪ್ರಶ್ನಾರಹಿತವಾಗಿರಲು ಸಾಧ್ಯವಿಲ್ಲ.

ತಮಗಿರುವ ನ್ಯಾಯಬದ್ಧ ಹಕ್ಕುಗಳನ್ನು ಎತ್ತಿ ಹಿಡಿಯಲು ಸಾಮರ್ಥ್ಯವಿಲ್ಲದ ವಾಸ್ತವ ಸ್ಥಿತಿಯ ಬಗ್ಗೆ ಹಂತ ಹಂತವಾಗಿ



ಅರಿತು, ಪ್ರಶ್ನಿಸಿ, ಬದಲಾಯಿಸಲು ಮಕ್ಕಳನ್ನು ಬಾಲ್ಯದಿಂದಲೇ ಪ್ರೋತ್ಸಾಹಿಸಬೇಕು. ಇದು ಮಕ್ಕಳ ಅಭಿವೃದ್ಧಿಗೆ ಮಾರಕವಾಗದಂತೆ ಅಥವಾ ಮಕ್ಕಳನ್ನು ಬಲವಂತಪಡಿಸದೆ ಮಕ್ಕಳಿಗೆ ಆತ್ಮ ಗೌರವ ಮತ್ತು ಸುರಕ್ಷಿತ ಭಾವನೆ ಬೆಳೆಯುವ ರೀತಿಯಲ್ಲಿ ಸಾಧ್ಯವಾಗಬೇಕು.

ದೊಡ್ಡವರ ಪಾತ್ರದ ಪುನರ್ ವ್ಯಾಖ್ಯಾನ

ಪೋಷಿಸುವವರಾಗಿ, ರಕ್ಷಕರಾಗಿ ನಾವು ವಹಿಸಬೇಕಾದ ಪಾತ್ರವನ್ನು ನಾವು ಉಪೇಕ್ಷಿಸಿದ್ದೇವೆ. ಮತ್ತೊಂದು ಕಡೆ ವಿರೋಧಿಸುವ ಪಾತ್ರದಿಂದ ನಾವು ಹಿಂದೆ ಸರಿದಿಲ್ಲ. ಮಕ್ಕಳ ಪರವಾಗಿ ವಕೀಲಿ ನಡೆಸುವ ಮತ್ತು ಅವರನ್ನು ನಿಯಂತ್ರಿಸುವ ಹಕ್ಕು ನಮಗಿದೆ, ಎಂದು ಅಂದುಕೊಂಡಿರುವುದರಿಂದ ಮಕ್ಕಳನ್ನು ಶೋಷಿಸುವ ಸಾಧ್ಯತೆಗಳು ನಮ್ಮಲ್ಲಿದೆ. ಇದನ್ನು ವಿರೋಧಿಸುವ ಸಾಮರ್ಥ್ಯ ಮತ್ತು ಹಕ್ಕು ಮಕ್ಕಳಿಗೆ ಇರಲೇಬೇಕು. 'ವಯಸ್ಕರ ವ್ಯವಹಾರಗಳಿಗೆ' ಸಂಬಂಧಿಸಿದಂತೆ ಮಕ್ಕಳ ಭಾಗವಹಿಸುವಿಕೆಯ ಮಟ್ಟ ಹಾಗೂ ಪ್ರಮಾಣ ಹಿರಿಯರು ಎಷ್ಟರಮಟ್ಟಿಗೆ ಮಕ್ಕಳಿಗೆ ಬಿಟ್ಟುಕೊಡುತ್ತಾರೆ. ಮತ್ತು ಮಕ್ಕಳಿಗೆ ಸ್ಥಳಾವಕಾಶ ಮಾಡಿಕೊಡಲು ಸಿದ್ಧರಿರುತ್ತಾರೆ ಎನ್ನುವುದನ್ನು ಅವಲಂಬಿಸಿರುವುದು ಸಹಜವಾಗಿಯೇ ವ್ಯಕ್ತವಾಗುತ್ತದೆ. ಈ ಆಟದ ನಿಯಮಗಳು ಮತ್ತು ಚೌಕಟ್ಟನ್ನು ನಾವೇ ಹಾಕುತ್ತೇವೆ. ನಾವು ಈಗ ಅನುಭವಿಸುತ್ತಿರುವ ಅಧಿಕಾರ ಮತ್ತು ನಿಯಂತ್ರಣದಲ್ಲಿ ಪಾಲುಕೊಡಲು ನಮಗಿರುವ ಇಚ್ಛೆಯನ್ನು ಇದು ಅವಲಂಬಿಸುತ್ತದೆ. ಮಕ್ಕಳ ಪರವಾಗಿ ವಯಸ್ಕರೇ ನಿರ್ಧಾರಗಳನ್ನು ಕೈಗೊಳ್ಳುವ ಹಾಗೂ ಮಕ್ಕಳಿಗಾಗಿ ಒಂದಷ್ಟು ಮಟ್ಟಗಳನ್ನು ನಿರ್ಧರಿಸುವ ಈ ಜಗತ್ತಿನಲ್ಲಿ, ಚಿಕ್ಕಪುಟ್ಟ ಮಕ್ಕಳ ಮಾತುಕೇಳುವುದು, 'ಏನಾದರೂ ಮಾಡುವುದರಲ್ಲಿ' ಮಕ್ಕಳನ್ನು ಒಳಗೊಳ್ಳುವುದನ್ನು ಹಾಗೂ ಬೆಳೆದಂತೆ ಅವರು ಸಮಾಜದ ಸದಸ್ಯರಾಗಲು ಅವರನ್ನು ಸಿದ್ಧ ಮಾಡುವುದು ಮಕ್ಕಳ ದೃಷ್ಟಿ ಕೋನದಿಂದ ಆಸಕ್ತಿದಾಯಕವಾದ ಮಾಹಿತಿ ಸಂಗ್ರಹಿಸುವ ವಿಧಾನ ಎಂದೇ ಅನೇಕರು ತಿಳಿದಿದ್ದಾರೆ. ಹಿರಿಯರಿಂದ ಇಂತಹ ಒಂದು ಸೌಕರ್ಯ ಮಕ್ಕಳಿಗೆ ತಮ್ಮ ಧ್ವನಿಯನ್ನು ವ್ಯಕ್ತಪಡಿಲು ಸ್ಥಳಾವಕಾಶವನ್ನು ತೆರೆದಿಡುತ್ತದೆ. ಆದರೆ ಇದು ಶೋಷಣೆಗೆ ಸಾಕ್ಷಿದಾರರಾಗಿ, ಬಲಿಪಶುಗಳಾಗಿರುವ ಒಂದು ರೂಪವನ್ನು ಸಂಕೇತಿಸುವುದನ್ನು ಪ್ರತಿಬಿಂಬಿಸುತ್ತದೆ. ಇದರೊಂದಿಗೆ ಹಿರಿಯರು ತಮ್ಮ 'ನೈಜವಾದ' ಚರ್ಚೆಗಳೊಂದಿಗೆ ಮುಂದುವರೆಯುತ್ತಾರೆ. ಯಾವಾಗ ಮಕ್ಕಳು ನಮ್ಮನ್ನು ಪ್ರಶ್ನಿಸಲು ಮುಂದೆ ಬರುತ್ತಾರೋ, ಆಗ ಮಧ್ಯೆ ಗೆರೆ ಎಳೆದು ನಿಯಂತ್ರಿಸಲೆತ್ನಿಸುತ್ತೇವೆ. ಅಪರೂಪಕ್ಕೆ ಯಾವಾದಲಾದರೊಮ್ಮೆ ಯಾವುದು ಹೇಗಿರಬೇಕು ಎಂಬ ಮಕ್ಕಳ ಸಲಹೆಗೆ ಅವಕಾಶ ನೀಡುತ್ತೇವೆ. ದಕ್ಷಿಣ ಆಫ್ರಿಕಾದ ಗಾದೆ ಮಾತೊಂದು ಹೀಗೆ ಹೇಳುತ್ತದೆ 'ಸಿಂಹಗಳ ಇತಿಹಾಸವನ್ನು ಹೇಳಲು ಅವರದೇ ಇತಿಹಾಸಕಾರರಿರುವರೆಗೆ, ಯಾವಾಗಲೂ ಇತಿಹಾಸವು ಬೇಟೆಗಾರರಿಂದಲೇ ಹೇಳಲ್ಪಡುತ್ತದೆ.''[5] ಆದ್ದರಿಂದ ಮಕ್ಕಳು ಇತಿಹಾಸವನ್ನು ಮತ್ತೆ ಬರೆಯುವ ಹಂತವನ್ನು ತಲುಪುವವರೆಗೆ, ಅವರು ನಮ್ಮ ದೃಷ್ಟಿಯಲ್ಲಿ ನಿಸ್ಸಾಹಯಕ ಬಲಿಪಶುಗಳಾಗಿ ಉಳಿಯುತ್ತಾರೆಯೇ ಹೊರತು ಚಿಕ್ಕವರಾದರೂ ನಿರ್ಣಯಿಸುವ ಸಾಮರ್ಥ್ಯವಿರುವ ಮತ್ತು ನವ ಯುಗದ ಬಗ್ಗೆ ಸಮಗ್ರ ಮತ್ತು ಸುಂದರ ದೃಷ್ಟಿಕೋನದ ಸಾಮರ್ಥ್ಯವಿರುವವರು ಎಂದು ಗುರುತಿಸಲ್ಪಡುವುದಿಲ್ಲ.




ಈ ಎಲ್ಲದರವುಗಳ ಪರಿಣಾಮ ಬೃಹತ್ತಾದುದು. ತಮ್ಮ ವಾಸ್ತವ ಸ್ಥಿತಿಯೊಡನೆ ಸಂಬಂಧಿಸಿ ಮಕ್ಕಳೂ ಸಹ ತಾವೊಂದು ಸಮಾಜದ ಸದಸ್ಯರಾಗಿ ತಮ್ಮ ಪಾತ್ರದ ಬಗ್ಗೆ ಅರಿತು, ಹಕ್ಕಿನೋಪಾದಿಯಲ್ಲಿ ಸಾಧಿಸಬಲ್ಲರು ಎಂಬುದು ಈಗಿನ ಪಿತೃಪಾಲನಾ ವ್ಯವಸ್ಥೆಗೊಂದು ದೊಡ್ಡ ಸವಾಲು. ವಯಸ್ಕಗಾಗಿ ನಾವು, ನಾವೀಗ ಇಟ್ಟುಕೊಂಡಿರುವ ಸ್ವರೂಪವನ್ನು ಬದಲಿಸಬೇಕು. ನಾವೀಗ ಅನುಭವಿಸುತ್ತಿರುವ ಏಕಸ್ವಾಮ್ಯ ಸ್ವರೂಪದ ಅಧಿಕಾರ ಮತ್ತು ನಿಯಂತ್ರಣಾ ಶಕ್ತಿಯನ್ನು ಹಂಚಿಕೊಳ್ಳಬೇಕು. ಮಕ್ಕಳೆದುರು ನಮ್ಮ ಪಾತ್ರವನ್ನು ಪುನರ್ ವ್ಯಾಖ್ಯಾನಿಸಬೇಕು. ತಾವು ತಮ್ಮ ಕುಟುಂಬ ಹಾಗೂ ಸಮುದಾಯದ ಬೆಳವಣಿಗೆಗೆ ಕೊಡುಗೆ ನೀಡಲು ಮಕ್ಕಳಿಗಿರುವ ಸಾಮರ್ಥ್ಯಕ್ಕೆ ಬೆಲೆ ನೀಡಬೇಕು.

ಮಕ್ಕಳ ಹಕ್ಕುಗಳ ಒಡಂಬಡಿಕೆಯ ಪರಿಕಲ್ಪನೆಯ ಚೌಕಟ್ಟು ಮಕ್ಕಳ ಬಾಲ್ಯ, ಮಕ್ಕಳ ಪಾತ್ರ ಮತ್ತು ಅವರ ಅಭಿವೃದ್ಧಿ ಬಗ್ಗೆ ಇರುವ ಹಲವಾರು ಹಳೆಯ ಕಲ್ಪನೆಗಳನ್ನು ಪುನರ್ ಪರಿಶೀಲಿಸಲು ನಮ್ಮನ್ನು ಒತ್ತಾಯಿಸುತ್ತದೆ. ಮಕ್ಕಳನ್ನು ಕೇಂದ್ರೀಕರಿಸಿದ ದೃಷ್ಟಿಕೋನಗಳು ತಾನೇ ತಾನಾಗಿ ಈ ಚೌಕಟ್ಟನ್ನು ಹಿಗ್ಗಿಸುವುದಲ್ಲದೆ ಅದರ ಪರಿಧಿಯನ್ನೂ ವಿಸ್ತಾರಗೊಳಿಸುತ್ತದೆ. ಉದಾಹರಣೆಗೆ, ಮಕ್ಕಳ ಕೆಲಸಕ್ಕೆ ಸಂಬಂಧಿಸಿದ ಈಗಿರುವ ಸಂಕುಚಿತ ದೃಷ್ಟಿಕೋನವು

ವಿಸ್ತಾರವಾಗಿ ಮಕ್ಕಳ ಪಾತ್ರ ಮತ್ತು ಸಮಾಜದಲ್ಲಿನ ಅವರ ಹಕ್ಕುಗಳಿಗೆ ಸಂಬಂಧಿಸಿದ ಸಮಗ್ರ ವಿಷಯಗಳನ್ನು ಪರಿಗಣಿಸಿ ವಿಸ್ತಾರವಾಗಬೇಕಿದೆ.

ಆದಾಗ್ಯೂ ಮಕ್ಕಳ ವಿಚಾರಗಳನ್ನು ವಯಸ್ಕರು ಒಪ್ಪುವುದೆಂದರೆ, ತಮ್ಮ ಜೀವನದ ಮುಂದಾಳುಗಳು ಮಕ್ಕಳೇ ಮತ್ತು ಮಕ್ಕಳು ಸಮಾಜದಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿರುವ ಕಾನೂನುಬದ್ಧರು ಎಂಬುದಕ್ಕೆ ಮನ್ನಣೆ ನೀಡಿದಂತಾಗುವುದು. ಈ ದೃಷ್ಟಿಕೋನ ವಾಸ್ತವದಲ್ಲಿರುವ ಪಿತೃಪ್ರಾಬಲ್ಯ ವ್ಯವಸ್ಥೆಯಲ್ಲಿ ಮಕ್ಕಳ ಬಗ್ಗೆ ಇರುವ ಸ್ವರೂಪಕ್ಕೆ ಸವಾಲೆಸೆಯುತ್ತದೆ.

ತಮಗೆ ಸಮಬಂಧಿಸಿದ ವಿಷಯಗಳ ಬಗ್ಗೆ ನಡೆಯುವ ತೀರ್ಮಾನಗಳಲ್ಲಿ ಮಕ್ಕಳಿಗೆ ಭಾಗವಹಿಸುವಿಕೆಯ ಹಕ್ಕು ಇದೆ ಎಂದ ಮಾತ್ರಕ್ಕೆ ಅವರಲ್ಲಿ ಎಲ್ಲದಕ್ಕೂ ಉತ್ತರಗಳಿವೆ ಎಂದಲ್ಲ ; ಮತ್ತು ಮಕ್ಕಳ ಬಗ್ಗೆ ನಮಗಿರುವ ಎಲ್ಲಾ ಜವಾಬ್ದಾರಿಗಳಿಂದ ನಾವು ಮುಕ್ತರೂ ಎಂದೂ ಅಲ್ಲ.

ಇದು ಕೇವಲ ಮಕ್ಕಳು ತಮ್ಮನ್ನು ತಾವು ರಕ್ಷಿಸಿಕೊಳ್ಳಲು ಮತ್ತು ತಮ್ಮ ಭವಿಷ್ಯದ ಪುನರ್ನಿರ್ಮಾಣ ಮಾಡಲು ಅವರನ್ನು ಶಕ್ತರಾಗಿಸಲು ನೀಡುವ ಮೊದಲ ಹೆಜ್ಜೆ. ತಮ್ಮ ಪರಿಸರದಲ್ಲಿ ಭಾಗವಹಿಸಲು ಮತ್ತು ಮಕ್ಕಳ ಹಕ್ಕುಗಳನ್ನು ಎತ್ತಿ ಹಿಡಿಯದಂತಿರುವ ಅಂಶಗಳನ್ನು ಬದಲಾಯಿಸುವ ಹಕ್ಕನ್ನು ಮಕ್ಕಳಿಗೆ ಕೊಡಲೇಬೇಕು. ನಾವು ಒಪ್ಪಲಾಗದಂತಹ ವಿಚಾರಗಳನ್ನು ಮಕ್ಕಳು ಹೇಳುತ್ತಾರೆ, ನಮ್ಮಲ್ಲಿ ಸಿದ್ಧ ಉತ್ತರಗಳಿಲ್ಲದ ಮುಜುಗರಕ್ಕೀಡಾಗುವಂತಹ ಪ್ರಶ್ನೆಗಳನ್ನು ಅವರು ಕೇಳುತ್ತಾರೆ ಮತ್ತು ಅವರವರ ಅನುಭವ ಹಿನ್ನೆಲೆಯಲ್ಲಿ ಮಕ್ಕಳು ತಾವೇ ತೆಗೆದುಕೊಂಡ ನಿರ್ಧಾರಗಳನ್ನು ಒಪ್ಪಲು ವಿರೋಧಿಸಲಬಹುದಾದಂತಹ ವಾಸ್ತವಗಳನ್ನೆದುರಿಸಲು ನಾವು ಸಿದ್ಧರಿರಬೇಕು. ಆದರೆ ಇವನ್ನೆಲ್ಲಾ ಒಪ್ಪಲು ನಾವು ಸಿದ್ಧರಿರಬೇಕು. ಮಕ್ಕಳಿಗೆ ಸಂಬಂಧಿಸಿದ ವಿಷಯಗಳನ್ನು ನಮ್ಮೆದುರಿಟ್ಟುಕೊಂಡು ಚರ್ಚಿಸುವ ಅವಶ್ಯಕತೆಯಿದೆ. ಅವರ ಪ್ರಶ್ನೆಗಳು ಉತ್ತರಿಸಲ್ಪಡಬೇಕು ಮತ್ತು ನಾನೇ ಸವಾಲಿಗೆ ಒಪ್ಪಿಕೊಂಡಾಗ ಮಾತ್ರಾ ಬಗೆಹರಿಸಬಹುದಾದಂತಹ ಪರಿಹಾರಗಳ ಸನಿಹಕ್ಕೆ ನಾವು ಹೋಗಬಹುದು.

ಅವರ ಕಣ್ಣೀರು, ಅವರ ನಗು, ಅವರ ದುಃಖ ಮತ್ತವರ ಆಸೆಗಳನ್ನು ಕೇಳುವತನಕ ನಾವವರ ದನಿ ಆಲಿಸುತ್ತಿರುತ್ತೇವೆ. - ಪುರಾತನ ಚೀನಿ ಗಾದೆ.

ಆಕರಗಳು :

1 "Elimination of exploitative child labour : Challenges and Progress', Statement by Ms. Teresa Albanez, Special advisor of the Executive Director of UNICEF and the Hearing of Child Labour, sponsored by the United States Department of Labor, Washington, D.C. - 5 May 1995.

2 Martin Woodhead's study 'Children's perspectives on their working lives'. Radda Barnen, May 1998.

3 Jaime Jesus Perez, Radda Barmen, Lima.

4 Amuktha Mahapatra, educationalist, India. Statement of Deputy President Thabo Mbeki, at the workshop 'Reporting on the implementation of the Convention on the Rights of the Child', Pretoria, July 24, 1997.

6 Ancient Chinese Proverb quoted in NATs, Working Children and Adolescents International Review, February 1995.

ನಂದನಾ ರೆಡ್ಡಿ , ನಿರ್ದೇಶಕರು, ದಿ ಕನ್ಸರ್ನ್ ಫಾರ್ ವರ್ಕಿಂಗ್ ಚಿಲ್ಡ್ರನ್

ಅನುವಾದ : ಸುಮತಿ ಡಿ.ಜಿ., ವಾಸುದೇವ ಶರ್ಮಾ.

# ಮಕ್ಕಳ ಹಕ್ಕುಗಳ ಕಾರ್ಯಕ್ರಮ ಯೋಜನೆ

- ಡಾ॥ ಆಶಾ ಬ್ಯಾನರ್ಜಿ

ಭಾರತದ ಶಾಲೆಗಳಲ್ಲಿ ಇಂದು ಒಬ್ಬ ಪರಿಶಿಷ್ಟ ಜಾತಿಯ ಮಗು ಎಂದರೇನು ಅರ್ಥ? ಹಿಂದುಳಿದ ವರ್ಗಗಳ ಮಕ್ಕಳ ಮೇಲೆ ಆಗುತ್ತಿರುವ ಸಾಮಾಜಿಕ ವಿರೋಧ ಹಿಂದೆಯೂ ಇತ್ತೇನು? ಇಂತಹ ಪ್ರಶ್ನೆಗಳಿಗೆ ವ್ಯವಸ್ಥಿತವಾದ ಸಂಶೋಧನೆಯ ಮೂಲಕ ಉತ್ತರ ಕಂಡುಕೊಳ್ಳುವುದು ಅಷ್ಟೇನೂ ಸುಲಭವಲ್ಲ. ಹಿಂದುಳಿದ ಜಾತಿಯ ಮಕ್ಕಳಿಗೆ ಶಾಲೆಗೆ ಹೋಗುವುದೆಂದರೆ ಅದೊಂದು ಭಯಾನಕ ಅನುಭವ ಆಗಿರುತ್ತದೆ ಎಂಬುದಕ್ಕೆ ಈಗಾಗಲೇ ನಡೆದಿರುವ ಅಧ್ಯಯನಗಳು ಸಾಕಷ್ಟು ಪುರಾವೆಗಳನ್ನು ಒದಗಿಸಿವೆ.

ಮಕ್ಕಳಿಗೆ ಘಾಸಿ ಉಂಟುಮಾಡುವಂತಹ ಅನೇಕ ರೀತಿಯ ತಾರತಮ್ಯಗಳು ಕಂಡೂಕಾಣದಂತೆ ನಡೆಯುತ್ತಲೇ ಇವೆ. ಮಕ್ಕಳ ತೇಜೋವಧೆ ಮಾಡುವಲ್ಲಿ ಶಿಕ್ಷಕರ ವರ್ತನೆಯೇ ಮೇಲುಗೈ. ಕೆಳ ಜಾತಿಯ ವಿದ್ಯಾರ್ಥಿಗಳ ಬಗ್ಗೆ ಮೇಲ್ಜಾತಿಯ ಅಧ್ಯಾಪಕರಿಗೆ ಯಾವುದೇ ರೀತಿಯ ಭರವಸೆಗಳು ಇರುವುದಿಲ್ಲ - ಆ ವಿದ್ಯಾರ್ಥಿಗಳು ಎಲ್ಲರೂ ಪೆದ್ದರು, ಶಿಕ್ಷಣಾರ್ಹರಲ್ಲ ಎಂಬುದೇ ಅವರ ಧೋರಣೆ. ಪರಿಶಿಷ್ಟ ಜಾತಿಗೆ ಸೇರಿದ ಇಂದಿನ ಅನೇಕ ವೃತ್ತಿಶೀಲರು ತಮ್ಮ ವಿದ್ಯಾರ್ಥಿ ಜೀವನವನ್ನು ನೆನಪಿಸಿಕೊಂಡಾಗ ಅಧ್ಯಾಪಕರು ತಮ್ಮನ್ನು 'ಪೆದ್ದರು', 'ಎಲ್ಲರಿಗಿಂತ ಕೀಳು' ಎಂದು ಭಾವಿಸುವಂತೆ ಮಾಡಿದುದೇ ಅಲ್ಲದೆ, ತಮಗಾರೂ 'ಗಮನ ಕೊಡುವುದೇ ಇಲ್ಲ' ಎಂಬ ಮನಸ್ಥಿತಿಗೆ ದೂಡಿದ್ದರು ಎನ್ನುತ್ತಾರೆ. ವಿದ್ಯಾರ್ಥಿಗಳ ನಡುವಿನ ಪಾರಸ್ಪರಿಕ ಸಂಬಂಧಗಳೂ ಸಹ ಸಮಸ್ಯೆಯೇ ಆಗಿತ್ತು. ಎಪ್ಪತ್ತರ ದಶಕದಲ್ಲಿ ಐ.ಸಿ.ಎಸ್.ಎಸ್. ನಡೆಸಿದ ಒಂದು ಅಧ್ಯಯನ ಹೀಗೆ ಹೇಳಿದೆ : 'ಶಾಲಾ ಕಾಲೇಜುಗಳಲ್ಲಿನ ವಿದ್ಯಾರ್ಥಿಗಳ ಗೆಳೆತನವೂ ಸಹ, ಪರಿಶಿಷ್ಟ ಜಾತಿಗಳಿಗೆ ಸಂಬಂಧಿಸಿದಂತೆ ಎಂದೂ ಸಹ ಜಾತಿಗಳ ಅಡ್ಡಗೋಡೆಗಳನ್ನು ಉರುಳಿಸಿರಲಿಲ್ಲ'. ಮೂವತ್ತು ವರ್ಷಗಳ ಹಿಂದೆ ಶಾಲೆಗೆ ಹೋಗಿದ್ದು ಈಗ ಶಿಕ್ಷಕರಾಗಿರುವ ಹಿಂದುಳಿದ ಜಾತಿಯ ಕೆಲವರು ಇತರ ವಿದ್ಯಾರ್ಥಿಗಳಿಂದ ದೂರ ಕುಳಿತು ಊಟ ಮಾಡಲು ಹೇಳುವುದೂ ಸೇರಿದಂತೆ ತಮ್ಮನ್ನು ಎಂತಹ ತಾರತಮ್ಯದಲ್ಲಿ ಕಾಣಲಾಗುತಿತ್ತು ಎಂದು ನೆನಪಿಸಿಕೊಂಡಿದ್ದಾರೆ (ಪ್ರೋಬ್ ವರದಿ). ಈ ಮೇಲೆ ಹೇಳಿರುವಂತಹ ಪರಿಸ್ಥಿತಿಗಳಲ್ಲಿ ಮಕ್ಕಳ ಹಕ್ಕುಗಳ ಪ್ರಸ್ತಾಪ ಎಂತಹದಿರಬಹುದು?

**ಶಿಕ್ಷಣಕ್ಕೊಂದು ಮಕ್ಕಳ ಹಕ್ಕುಗಳ ಪ್ರಸ್ತಾಪ.**

ಶಿಕ್ಷಣಕ್ಕೆ ಮಕ್ಕಳ ಹಕ್ಕುಗಳ ಪ್ರಸ್ತಾಪವೆಂದರೆ, ಮಕ್ಕಳ ಶಿಕ್ಷಣವನ್ನು ಮಕ್ಕಳ ಹಕ್ಕುಗಳ ಒಡಂಬಡಿಕೆಯ ಸಂದರ್ಭದಲ್ಲಿ ಅರ್ಥಮಾಡಿಕೊಳ್ಳುವುದೇ ಆಗಿದೆ. ಶಿಕ್ಷಣ ಪ್ರಸ್ತುತವೂ, ವಿಕಾಸಕ್ಕೆ ದಾರಿ ಮಾಡಿಕೊಡುವುದೂ ಮತ್ತು ಎಲ್ಲವನ್ನು ಒಳಗೊಂಡಿರುವಂತೆಯೂ ಇರಬೇಕು.

**ಪ್ರಸ್ತುತವೆನಿಸುವ ಶಿಕ್ಷಣ - ಪರಿಚ್ಛೇದ 6: ಉಳಿವು ಮತ್ತು ಅಭಿವೃದ್ಧಿ ಹೊಂದಲು ಹಕ್ಕು.**

ವಾಸ್ತವ ಜೀವನದ ಸವಾಲುಗಳನ್ನು ವರ್ತಮಾನದಲ್ಲಿ ಮತ್ತು ಭವಿಷ್ಯದಲ್ಲಿ ಸಮರ್ಥವಾಗಿ ಎದುರಿಸಲು ಬೇಕಾದ ಜ್ಞಾನ ಮತ್ತು ಕೌಶಲ್ಯಗಳನ್ನು, ಸಿದ್ಧರಾಗುವ ಸಾಮರ್ಥ್ಯವನ್ನು ಮಕ್ಕಳಿಗೆ ಶಿಕ್ಷಣವು ನೀಡಬೇಕಿದೆ. ಇದಕ್ಕೆ ಬೇಕಾದ ತೀರಾ ಮೂಲಭೂತವಾದ ಕೌಶಲ್ಯಗಳು ಅಕ್ಷರಜ್ಞಾನ, ಲೆಕ್ಕಾಚಾರ ಮತ್ತು ಸ್ವಂತವಾಗಿ ಕಲಿಯುವ ಸಾಮರ್ಥ್ಯ. ನಿರ್ದಿಷ್ಟ ಸಂದರ್ಭಗಳಲ್ಲಿ ಇವುಗಳ ಪ್ರಸ್ತುತತೆಯು ಸಿದ್ಧವಾಗುವುದು, ಶಿಕ್ಷಣ ವ್ಯವಸ್ಥೆಯು ಮಕ್ಕಳಿಗೆ, ಸ್ಥಳೀಯ ಸಮುದಾಯ ಮತ್ತು ಬದಲಾಗುತ್ತಿರುವ ಸಮಯಕ್ಕೆ ಸ್ಪಂದಿಸುತ್ತಿದ್ದಾಗ ಮಾತ್ರ. ಮಕ್ಕಳ ಹಕ್ಕುಗಳಿಗೆ ಇದು ಸಂಬಂಧಿಸುವುದು ಹೀಗೆ :

- ಎಲ್ಲ ಮೂಲಗಳಿಂದ ಮಾಹಿತಿ (ಪರಿಚ್ಛೇದ 17)
- ಆರೋಗ್ಯ ಮತ್ತು ಆರೋಗ್ಯ ಶಿಕ್ಷಣ (ಪರಿಚ್ಛೇದ 24)
- ಮಾದಕ ವಸ್ತುಗಳು ಮತ್ತು ಅವುಗಳ ದುರುಪಯೋಗದ ವಿರುದ್ಧ ರಕ್ಷಣೆ (ಪರಿಚ್ಛೇದ 33)
- ಆರೋಗ್ಯಪೂರ್ಣ ಪರಿಸರ (ಪರಿಚ್ಛೇದ 24)

**ಅಭಿವೃದ್ಧಿಪರ ಶಿಕ್ಷಣ - ಪರಿಚ್ಛೇದ 29 : ತಮ್ಮ ಸಾಮರ್ಥ್ಯಗಳನ್ನು ವೃದ್ಧಿಸಿಕೊಳ್ಳುವ ಹಾಗೂ ಸಮುದಾಯದ ಜವಾಬ್ದಾರಿಗಳನ್ನು ತೆಗೆದುಕೊಳ್ಳಲು ಪ್ರೇರೇಪಿಸುವಂತಹ ಶಿಕ್ಷಣ ಪಡೆಯುವ ಹಕ್ಕನ್ನು ಮಕ್ಕಳು ಹೊಂದಿದ್ದಾರೆ.**

ಇದನ್ನು ಸಾಧಿಸಲು, ಮಕ್ಕಳು ಹೇಗೆ ಅಭಿವೃದ್ಧಿ ಹೊಂದುತ್ತಾರೆ ಮತ್ತು ಕಲಿಯುವ ಪರಿಸರದಲ್ಲಿನ ಅವರ ಮನಸ್ಥಿತಿ ಎಂತಹದು ಎಂಬುದನ್ನು ಅರ್ಥಮಾಡಿಕೊಂಡು ಭಾಗವಹಿಸುವಿಕೆಯ ವಿಧಾನಗಳು ಹಾಗೂ ಕ್ರಿಯಾಶೀಲ ಕಲಿಕೆಯನ್ನು ಬಳಸುವ ಆವಶ್ಯಕತೆಯಿದೆ. ಹಾಗೆಂದರೆ, ಮಕ್ಕಳಿಗೆ ಈ ಮುಂದಿನ ಹಕ್ಕುಗಳಿವೆ :

- ಮಕ್ಕಳ ದೃಷ್ಟಿ ಹಾಗೂ ವಿಚಾರಗಳನ್ನು ಆಲಿಸಬೇಕು, ಗೌರವಿಸಬೇಕು (ಪರಿಚ್ಛೇದ -12)
- ಒಗ್ಗೂಡುವ, ಸೇರುವ ಸ್ವಾತಂತ್ರ್ಯ ಹಾಗೂ ಶಾಂತಯುತವಾಗಿ ಸಭೆ ಸೇರಲು ಅವಕಾಶ (ಪರಿಚ್ಛೇದ -15)
- ವಿಶ್ರಾಂತಿ ಮತ್ತು ಕ್ರೀಡೆ (ಪರಿಚ್ಛೇದ -31) ಶಾಲೆಯ ಶಿಸ್ತು ಈ ಮುಂದಿನವುಗಳನ್ನು ಮೀರಬಾರದು.
- ಮಕ್ಕಳ ಮಾನವೀಯ ಗೌರವ (ಪರಿಚ್ಛೇದ -28)

- ಮಕ್ಕಳ ಖಾಸಗೀತನದ ಹಕ್ಕಿಗೆ ಮನ್ನಣೆ ಹಾಗೂ ಮಗುವಿನ ಮೇಲೆ ಹಾಗೂ ಆದರ ಗೌರವ ಪ್ರತಿಷ್ಠೆಗಳ ಮೇಲೆ ಕಾನೂನಿಗೆ ವಿರುದ್ಧವಾಗಿ ಧಾಳಿಮಾಡುವುದರ ವಿರುದ್ಧ ರಕ್ಷಣೆ (ಪರಿಚ್ಛೇದ -16)
- ದೈಹಿಕ ಹಾಗೂ ಮಾನಸಿಕ ಹಿಂಸೆಯ ವಿರುದ್ಧ ರಕ್ಷಣೆ (ಪರಿಚ್ಛೇದ -19)

**ಅಂತರ್ಗತ ಶಿಕ್ಷಣ - ಪರಿಚ್ಛೇದ 28 : ಎಲ್ಲ ಮಕ್ಕಳಿಗೂ ಶಿಕ್ಷಣದ ಹಕ್ಕಿದೆ. ಪರಿಚ್ಛೇದ 2. ತಾರತಮ್ಯದ ವಿರುದ್ಧ ರಕ್ಷಿಸುವ ನಿಯಮ.**

ಎಲ್ಲ ಮಕ್ಕಳಿಗೂ ಭಾಗವಹಿಸಲು ಸಾಧ್ಯವಾಗುವಂತಹ ಶೈಕ್ಷಣಿಕ ವ್ಯವಸ್ಥೆಯನ್ನು ಸರ್ಕಾರವು ಮಾಡಬೇಕು ಮತ್ತು ಮಕ್ಕಳ ಈ ಮುಂದಿನ ಹಕ್ಕುಗಳನ್ನು ಗುರುತಿಸಬೇಕು.

- ಎಲ್ಲ ಮಕ್ಕಳಿಗೂ ಸ್ವತಂತ್ರವಾಗಿ ಚಿಂತಿಸುವ ಆತ್ಮ ಸಾಕ್ಷಿಯಂತೆ ನಡೆಯುವ ಹಾಗೂ ಯಾವುದಾದರೂ ಧರ್ಮವೊಂದನ್ನು ಪಾಲಿಸುವ ಹಕ್ಕಿದೆ (ಪರಿಚ್ಛೇದ 14)
- ಅಲ್ಪಸಂಖ್ಯಾತರಿಗೆ ಅವರದೇ ಆದ ಸಂಸ್ಕೃತಿ, ಧರ್ಮ ಹಾಗೂ ಭಾಷೆಯನ್ನು ಹೊಂದುವ ಹಕ್ಕಿದೆ (ಪರಿಚ್ಛೇದ 30)
- ಅಂಗವೈಕಲ್ಯತೆಯಿರುವ ಮಕ್ಕಳಿಗೆ ಅವರ ಗೌರವ, ಘನತೆಗಳಿಗೆ ಕುಂದು ಬರದಂತಹ ವಾತಾವರಣದಲ್ಲಿ ಎಲ್ಲರೊಡನೆ ಕ್ರಿಯಾತ್ಮಕವಾಗಿ ಭಾಗವಹಿಸುವ ಹಕ್ಕಿದೆ (ಪರಿಚ್ಛೇದ 23)
- ನಿರ್ಲಕ್ಷ್ಯಕ್ಕೆ / ಶೋಷಣೆಗೆ ಒಳಗಾದ ಮಕ್ಕಳು ಸಮಾಜದ ಮುಖ್ಯ ವಾಹಿನಿಯಲ್ಲಿ ಬೆರೆಯಲು ಬೇಕಾದ ಸೂಕ್ತ ಕ್ರಮಗಳನ್ನು ಕೈಗೊಳ್ಳಬೇಕು (ಪರಿಚ್ಛೇದ 39)

ಮಕ್ಕಳ ಹಕ್ಕುಗಳ ಹಿನ್ನೆಲೆಯಲ್ಲಿ ತೆಗೆದುಕೊಳ್ಳಲಾಗಿರುವ ವಿಷಯಗಳು ಕೇವಲ ಶಿಕ್ಷಣ ಮಾತ್ರವಲ್ಲ. ಇನ್ನೂ ಅನೇಕ ವಿಚಾರಗಳಿವೆ, ಜೊತೆಗೆ ಮಕ್ಕಳ ಯಾವುದೇ ಹಕ್ಕನ್ನು ಕ್ಷೇತ್ರಕ್ಕನುಗುಣವಾಗಿ ಪ್ರತ್ಯೇಕವಾಗಿ ನೋಡಲಾಗದು, ಮಗುವಿನ ಶಿಕ್ಷಣದ ಹಕ್ಕು ಆರೋಗ್ಯದ ಹಕ್ಕಿಗಿಂತ ಕಡಿಮೆಯೇನೂ ಅಲ್ಲ.

**ಮಕ್ಕಳ ಹಕ್ಕುಗಳು ಅದೇಕೆ ಅಷ್ಟೊಂದು ಮುಖ್ಯ?**

ಮಾನವ ಹಕ್ಕುಗಳ ವಿಶಾಲವಾದ ಚೌಕಟ್ಟಿನಲ್ಲೇ ಮಕ್ಕಳ ಹಕ್ಕುಗಳೂ ಸಹ ಗಮನಿಸಲ್ಪಡುತ್ತವೆ ಎಂಬುದು ಹಳೆಯ ಚಿಂತನೆ. ಮಾನವ ಹಕ್ಕುಗಳಲ್ಲಿ ಮಕ್ಕಳ ಹಕ್ಕುಗಳ ಬಗ್ಗೆ ಉಲ್ಲೇಖವಿದ್ದರೂ, ಅದು ಅಲ್ಲಿ ಇಲ್ಲಿ ಹರಿದು ಹಂಚಿಹೋಗಿದ್ದು, ಅದನ್ನು ಗಮನಿಸದೇ ಇರಬಹುದು ಅಥವಾ ಅದು ತೀರಾ ಪ್ರತ್ಯೇಕವಾಗಿ ನಿರ್ವಹಿಸಲ್ಪಡಬಹುದು. ಮಕ್ಕಳಿಗೆ ಅತ್ಯಾವಶ್ಯಕವಾಗಿ ಬೇಕಾದ ರಕ್ಷಣೆ, ಆರೈಕೆಗಳನ್ನು ಖಾತರಿಗೊಳಿಸುವ ಹಕ್ಕುಗಳ ನಿರ್ದಿಷ್ಟ ಗುಂಪಿಗೆ ಇವು ಸೇರುವುದಿಲ್ಲ. ಮಕ್ಕಳು ಒಂದು ವಿಶೇಷ ಘಟಕ ಎಂಬುದು ಸೇವ್ ದಿ ಚಿಲ್ಡ್ರನ್ ಫಂಡ್ (ಎಸ್.ಸಿ.ಎಫ್) ನ ನಮ್ಮ ನಂಬಿಕೆ. ವಯಸ್ಕರಿಗಿಂತ ವಿಭಿನ್ನವಾದ ಆವಶ್ಯಕತೆಗಳು ಮತ್ತು ಹಕ್ಕುಗಳನ್ನು ಮಕ್ಕಳು ಹೊಂದಿದ್ದಾರೆ. ಹೀಗಾಗಿ, ಅವರ ಹಕ್ಕುಗಳಿಗೆ ಪ್ರತ್ಯೇಕವಾದ ಮಾನ್ಯತೆ ಬೇಕಿದೆ. ಮಾನವ ಹಕ್ಕುಗಳನ್ನು ಸರ್ವೆ ಸಾಮಾನ್ಯವಾಗಿ ತೆಗೆದುಕೊಳ್ಳುವುದು ಮಕ್ಕಳಿಗೆ ಸೂಕ್ತವಲ್ಲ, ಮತ್ತದು ಅವರಿಗೆ ನ್ಯಾಯ ಒದಗಿಸುವುದಿಲ್ಲ. ಮಕ್ಕಳು ಈ ಪರಿಧಿಯಲ್ಲಿ 'ಅದೃಶ್ಯ'ರಾಗಿ ಹೋಗುತ್ತಾರೆ.



ವ್ಯಕ್ತಿಗತವಾಗಿ ಮಕ್ಕಳ ಹಕ್ಕುಗಳನ್ನು ರಕ್ಷಿಸುವುದಷ್ಟೇ ಅಲ್ಲದೆ, ಎಲ್ಲ ಮಕ್ಕಳು ತಮ್ಮ ಸಂಪೂರ್ಣ ಸಾಮರ್ಥ್ಯವನ್ನು ಬಳಸಿಕೊಳ್ಳಲು ತಕ್ಕುದಾದ ಪರಿಸ್ಥಿತಿಗಳ ನಿರ್ಮಾಣವೂ ಸಹ ಎಸ್.ಸಿ.ಎಫ್.ಗೆ ಬಹಳ ಮುಖ್ಯ. ದೈಹಿಕ ದುರ್ಬಲತೆ ಮತ್ತು ಅನನುಭವ, ಜ್ಞಾನದ ಅಭಾವ ಮಕ್ಕಳನ್ನು ವಯಸ್ಕರ ಮೇಲೆ ಸಂಪೂರ್ಣವಾಗಿ ಇಲ್ಲವೆ ಅಷ್ಟಿಷ್ಟು ದೀರ್ಘಕಾಲ ಅವಲಂಬಿತರನ್ನಾಗಿಸುತ್ತದೆ. ಮಕ್ಕಳ ಉಳಿವು ಹಾಗೂ ಅಭಿವೃದ್ಧಿ, ವಯಸ್ಕರು ಮಕ್ಕಳಿಗೆ ಎಂತಹ ಗುಣಮಟ್ಟವುಳ್ಳ ರಕ್ಷಣೆ ಹಾಗೂ ಬದ್ಧತೆಯನ್ನು ನೀಡುತ್ತಾರೆ ಎಂಬುದನ್ನು ಅವಲಂಬಿಸಿದೆ. ಬಹುತೇಕ ಸಮಾಜಗಳಲ್ಲಿ ಮಕ್ಕಳಿಗೆ ಔಪಚಾರಿಕವಾಗಿ ಅಭಿಪ್ರಾಯ ವ್ಯಕ್ತಪಡಿಸುವುದಕ್ಕೆ

ಅವಕಾಶಗಳು ಇರುವುದಿಲ್ಲ. ಜೊತೆಗೆ ಅವರ ದೈಹಿಕ ಹಾಗೂ ಮಾನಸಿಕ ದುರ್ಬಲತೆ, ಎಲ್ಲರೊಡಗೂಡಿ ಸಮಾಜದಲ್ಲಿ ಕ್ರಿಯಾತ್ಮಕವಾಗಿ ಭಾಗಿಯಾಗದಂತೆ ತಡೆಯೊಡ್ಡುತ್ತದೆ. ಮಕ್ಕಳ ಹಕ್ಕುಗಳ ಕುರಿತಾದ ಒಂದು ಸ್ಪಷ್ಟಹೇಳಿಕೆ ಇಂತಹ ಪ್ರತ್ಯೇಕತೆಗಳನ್ನು ಇಲ್ಲವಾಗಿಸುವುದು. ಹಾಗಾದರೆ, ಹಕ್ಕುಗಳು ಆವಶ್ಯಕತೆಗಳಿಗಿಂತ ಭಿನ್ನವಾಗುವುದಾದರೂ ಹೇಗೆ?

**ಹಕ್ಕುಗಳು ಮತ್ತು ಆವಶ್ಯಕತೆಗಳನ್ನು ಅವಲಂಬಿಸಿದ ದೃಷ್ಟಿ**

ಮಕ್ಕಳ ಹಕ್ಕುಗಳ ಕಾರ್ಯಕ್ರಮಗಳನ್ನು, ಆವಶ್ಯಕತೆ ಆಧಾರಿತ ದೃಷ್ಟಿಯ ವೈರುಧ್ಯತೆಯಿಂದಲೇ ನೋಡಿ ವಿಮರ್ಶಿಸಲಾಗುತ್ತದೆ. ಈ ಎರಡೂ ಅಷ್ಟೇನೂ ವಿಭಿನ್ನವಲ್ಲ. ಆದರೆ ಈ ಎರಡೂ ಕಲ್ಪನೆಗಳು ಕಾರ್ಯಕ್ರಮಗಳನ್ನು ರೂಪಿಸುವಾಗ ಮತ್ತು ಅವುಗಳಿಂದಾಗುವ ಪರಿಣಾಮಗಳ ದೃಷ್ಟಿಯಲ್ಲಿ ವಿಭಿನ್ನವಾಗಿವೆ.

**ಹಕ್ಕುಗಳ ದೃಷ್ಟಿಯಲ್ಲಿ...**

- ಮಕ್ಕಳಿಗೆ ರಕ್ಷಣೆ ಹೊಂದುವ ಅಧಿಕಾರವಿದೆ.
- ಸರಕಾರಗಳಿಗೆ ನ್ಯಾಯಿಕ ಹಾಗೂ ನೈತಿಕ ಹೊಣೆ ಇದೆ ಮತ್ತು ಭಾಗವಹಿಸುವುದು ಮಕ್ಕಳ ಹಕ್ಕು.
- ಎಲ್ಲ ಮಕ್ಕಳಿಗೂ ತಮ್ಮ ಸಾಮರ್ಥ್ಯಗಳನ್ನು ಪೂರೈಸಿಕೊಳ್ಳಲು ಸಮಾನ ಹಕ್ಕಿದೆ.
- ನಮ್ಮೆದುರು ಇರುವ ಹೆಗ್ಗುರಿಯನ್ನು ಮುಟ್ಟಲು ಎಲ್ಲ ಕೆಲಸಗಳಿಗೂ ಪಾಲಿದೆ.
- ಮಕ್ಕಳ ಹಕ್ಕುಗಳನ್ನು ಸಾಧಿಸಲು ಪ್ರತಿಯೊಬ್ಬ ವಯಸ್ಕರಿಗೂ ಪಾತ್ರವಿದೆ.

**ಆವಶ್ಯಕತೆಯ ದೃಷ್ಟಿಯಲ್ಲಿ**

- ಮಕ್ಕಳಿಗೆ ರಕ್ಷಣೆ ಬೇಕು.
- ಸರಕಾರವೂ ಏನಾದರೊಂದನ್ನು ಮಾಡಲೇಬೇಕು, ಆದರೆ ಯಾರೊಬ್ಬರಿಗೂ ನಿಶ್ಚಿತ ಜವಾಬ್ದಾರಿಯಿಲ್ಲ.
- ಸೇವೆಗಳು ಸರಿಯಾಗಿ ತಲುಪಲು ಮಕ್ಕಳೂ ಭಾಗವಹಿಸಬಹುದು.
- ಸಂಪನ್ಮೂಲಗಳ ಕೊರತೆಯಿಂದಾಗಿ ಕೆಲವು ಮಕ್ಕಳಿಗೆ ಏನೂ ತಲುಪದಿರಬಹುದು.
- ಪ್ರತಿ ಕೆಲಸಕ್ಕೂ ತನ್ನದೇ ಆದ ಗುರಿಯಿರುತ್ತದೆ, ಆದರೆ ಅವುಗಳನ್ನೆಲ್ಲಾ ಒಟ್ಟಾಗಿ ಸೇರಿಸುವ ಉದ್ದೇಶವಿರುವುದಿಲ್ಲ.
- ಕೆಲವು ಗುಂಪುಗಳಿಗೆ ಮಕ್ಕಳ ಆವಶ್ಯಕತೆಗಳನ್ನು ಪೂರೈಸಬಲ್ಲ ತಾಂತ್ರಿಕ ಕೌಶಲ್ಯಗಳಿವೆ.

ಒಟ್ಟಾರೆ ಹೇಳುವುದಾದರೆ, ಆವಶ್ಯಕತೆಗಳನ್ನು ಅವುಗಳ ಪ್ರಾಮುಖ್ಯತೆಯನ್ನು ಆಧರಿಸಿ ಶ್ರೇಣೀಕರಿಸಬಹುದು, ಆದರೆ ಹಕ್ಕುಗಳನ್ನು ಶ್ರೇಣೀಕರಿಸಲಾಗದು. **ಎಲ್ಲ ಮಕ್ಕಳ ಎಲ್ಲ ಹಕ್ಕುಗಳು ಒಂದೇ ರೀತಿ ಪ್ರಮುಖವಾದುವು.**

**ಮಕ್ಕಳ ಹಕ್ಕುಗಳ ಕಾರ್ಯಕ್ರಮವೆಂದರೇನು?**




ಮಕ್ಕಳ ನಿರ್ದಿಷ್ಟ ಮಾನವ ಹಕ್ಕುಗಳನ್ನು ಈಡೇರಿಸುವ ಧೋರಣೆಯನ್ನು ಆಧರಿಸಿರುವ ಕಾರ್ಯಗಳೇ ಮಕ್ಕಳ ಹಕ್ಕುಗಳ ಕಾರ್ಯಕ್ರಮಗಳು. ಇದು ಮಕ್ಕಳ ಹಕ್ಕುಗಳನ್ನು ಈಡೇರಿಸುವ ಸಮಾಜವನ್ನು ಪ್ರತಿನಿಧಿಸುವುದು, ಏಕೆಂದರೆ, ಮಕ್ಕಳ ಸುತ್ತ ಮುತ್ತಲಿನ ಅಲ್ಲಿನ ವಾತಾವರಣ, ಮಕ್ಕಳ ಹಕ್ಕುಗಳನ್ನು ಗುರುತಿಸುವುದಷ್ಟೇ ಅಲ್ಲ ಗೌರವಿಸುವುದೂ ಸಹ. ಸಂಪನ್ಮೂಲಗಳು ಹೇಗೆ ಹಂಚಿಕೆಯಾಗಿದೆ, ಲಭ್ಯವಿರುವ ಸೇವಾ ಸೌಲಭ್ಯಗಳ ಗುಣಮಟ್ಟ ಎಂತಹದು, ಸರಕಾರದ ನಿರ್ಧಾರಗಳು, ನೀತಿ ನಿಯಮಗಳು ಎಂತಹವು ಹಾಗೂ ಸಮುದಾಯಗಳು ಮಕ್ಕಳ ಮಾನವ ಹಕ್ಕುಗಳನ್ನು ಈಡೇರಿಸುವ ಅಥವಾ ತಡೆಹಿಡಿಯುವಂತಹ ವ್ಯಕ್ತಿ ಮತ್ತು ಗುಂಪುಗಳಿಂದ ರಚಿಸಲ್ಪಟ್ಟಿದೆ.

ಒಟ್ಟಿನಲ್ಲಿ ಮಕ್ಕಳ ಹಕ್ಕುಗಳಿಗಾಗಿ ಕಾರ್ಯಕ್ರಮ ಎಂದರೆ ಅದು ಈ ಹಿಂದೆ ಮಾಡುತ್ತಿದ್ದ ಮಕ್ಕಳ ಹಕ್ಕುಗಳ ಕಾರ್ಯಕ್ರಮಗಳು ಅಥವಾ ಮಕ್ಕಳ ಹಕ್ಕುಗಳ ಕಾರ್ಯ ಎಂಬುದಕ್ಕಿಂತಾ ಸಾಕಷ್ಟು ಭಿನ್ನವಾಗಿದೆ. ಮಕ್ಕಳ ಹಕ್ಕುಗಳ ಕಾರ್ಯಕ್ರಮವೆಂದರೆ, ಈಗ ಮಾಡುತ್ತಿರುವ ಇನ್ನಿತರ ಕೆಲಸಗಳಿಗೆ ಇದೂ ಒಂದು ಸೇರ್ಪಡೆ ಎಂಬಂತೆ ಮಾಡಿ, ಇದೇ, 'ಮಕ್ಕಳ ಹಕ್ಕುಗಳ

ಒಡಂಬಡಿಕೆಯ ಕೆಲಸ' ಅಥವಾ ಮಕ್ಕಳ ಹಕ್ಕುಗಳ ತರಬೇತಿ ಎನ್ನುವಂತಾಗಿದೆ. ಹೀಗಾಗಿ ಮಕ್ಕಳ ಹಕ್ಕುಗಳ ಕೆಲಸವನ್ನು ಆರೋಗ್ಯ ಕಾರ್ಯಕ್ರಮಗಳು, ಆದಾಯ ಉತ್ಪಾದನ ಕೆಲಸಗಳು ಅಥವಾ ಸಂಸ್ಥೆಯಲ್ಲಿ ಮಕ್ಕಳನ್ನು ನೋಡಿಕೊಳ್ಳುವುದು - ಎಂಬಂತಹ ಇನ್ನಿತರ ವಿಭಾಗಗಳ ಮೇಲೆ ಯಾವುದೇ ಪ್ರಭಾವ ಬೀರದಂತಹ ವಿವಿಧ ವಿಭಾಗಗಳ ಕೆಲಸಗಳಂತೆ ನೋಡಬಹುದು ಎಂಬಂತಾಗಿದೆ. ಈ ದೃಷ್ಟಿಯಲ್ಲಿ ನೋಡಿದಾಗ, ಮಕ್ಕಳ ಹಕ್ಕುಗಳ ಕೆಲಸವೆಂಬುದು ಯೋಜನೆ ತಯ್ಯಾರಿ ಹಾಗೂ ಕಾರ್ಯಕ್ರಮ ರಚನೆಯಲ್ಲಿ ತೆಗೆದುಕೊಳ್ಳಬಹುದು ಅಥವಾ ಬಿಡಬಹುದು ಎಂಬ ಮನೋಭಾವನೆ ಬಳಸುವುದೇ ವಿನಹ ಇದು ಇನ್ನಿತರ ಎಲ್ಲಾ ಕಾರ್ಯಕ್ರಮಗಳಲ್ಲಿ ಜೊತೆ ಜೊತೆಯಾಗಿ ಸೇರಬೇಕಾದ ಮುಖ್ಯ ಅಂಶ ಎನ್ನುವುದು ಮರೆಯಾಗುತ್ತದೆ.




ಮಕ್ಕಳ ಹಕ್ಕುಗಳಿಗಾಗಿ ಕಾರ್ಯಕ್ರಮದ ಮುಖ್ಯ ಗುರಿ, ಮಕ್ಕಳ ಸುತ್ತ ಮುತ್ತ ಮಕ್ಕಳ ಮಾನವ ಹಕ್ಕುಗಳನ್ನು ಸಂಪೂರ್ಣವಾಗಿ ಗೌರವಿಸುವಂತಹ ವಾತಾವರಣದ ಸೃಷ್ಟಿ. ಜಗತ್ತಿನೆಲ್ಲೆಡೆ ಮಕ್ಕಳೊಡನೆ ಕೆಲಸ ಮಾಡುತ್ತಾ ವೈವಿಧ್ಯಮಯವಾದ ಅನುಭವಗಳನ್ನು ಹೊಂದಿರುವ ಸೇವ್ ದಿ ಚಿಲ್ಡ್ರನ್ (ಯುನೈಟೆಡ್ ಕಿಂಗ್‌ಡಂ) ಇದನ್ನು ಅಭಿವೃದ್ಧಿಪಡಿಸಿದೆ. ಮಕ್ಕಳ ಹಕ್ಕುಗಳಿಗಾಗಿ ಕಾರ್ಯಕ್ರಗಳ ಒಟ್ಟಾರೆ ಗುರಿಯನ್ನು ಈ ರೀತಿ ನೋಡಬಹುದು :

- ಹಕ್ಕುಗಳ ಉಲ್ಲಂಘನೆಯನ್ನು ನೇರವಾಗಿ ಎದುರಿಸುವ ಕೆಲಸಗಳು.
- ತೊಡಕುಗಳನ್ನು, ಕಷ್ಟಗಳನ್ನು ನಿವಾರಿಸಲು ಮೂಲಭೂತ ಸೌಕರ್ಯಗಳ ವ್ಯವಸ್ಥೆಯನ್ನು ಬಲ ಪಡಿಸುವುದು; ಎಲ್ಲರನ್ನು ಜವಾಬ್ದಾರರನ್ನಾಗಿಸುವುದು ಹಾಗೂ ಮಕ್ಕಳ ಹಕ್ಕುಗಳ ಬೆಳವಣಿಗೆಯನ್ನು ಉಸ್ತುವಾರಿ ಮಾಡುವುದು.
- ಸರಕಾರ, ಮಾಧ್ಯಮ ಹಾಗೂ ಖಾಸಗೀ ರಂಗವೇ ಮೊದಲಾದ ಕ್ಷೇತ್ರಗಳಲ್ಲಿರುವ ವ್ಯಕ್ತಿಗಳ ಮೂಲಕ ಮಕ್ಕಳ ಹಕ್ಕುಗಳ ಉನ್ನತಿಗಾಗಿ ಸಮಾಜದಲ್ಲಿ ಬೆಂಬಲ ಪಡೆಯನ್ನು ನಿರ್ಮಿಸುವುದು.

ಯಾವುದೇ ಪ್ರದೇಶ ಅಥವಾ ದೇಶದಲ್ಲಿ ಯಾವುದೇ ಕಾರ್ಯಕ್ರಮ ಕೈಗೊಳ್ಳುವಾಗ ಈ ಮೇಲಿನ ಮೂರು ಅಂಶಗಳಲ್ಲಿ ಯಾವ ರೀತಿಯ ಸಂಯೋಜನೆ ಮಕ್ಕಳ ಹಕ್ಕುಗಳನ್ನು ಸೂಕ್ತವಾಗಿ ಮುಂದಕ್ಕೊಯ್ಯುತ್ತದೆ ಎಂಬುದನ್ನು ಗಮನಿಸಬೇಕು. ಪ್ರಾಯೋಗಿಕವಾಗಿ ಮಾಡಿ ತೋರಿಸುವುದರ ಮೂಲಕ ಅಥವಾ ನೀತಿ, ಕಾನೂನು ಮತ್ತು ಕ್ರಿಯೆಯಲ್ಲಿ ಸಾಕಷ್ಟು ಬದಲಾವಣೆ ತರುವುದರ ಮೂಲಕ ಜಗತ್ತಿನೆಲ್ಲೆಡೆ ಮಕ್ಕಳ ಹಕ್ಕುಗಳ ಜಾರಿಯನ್ನು ನಿಜ ಮಾಡುವ ನಿಟ್ಟಿನಲ್ಲಿರಬೇಕೆಂಬುದು ಸೇವ್ ದಿ ಚಿಲ್ಡ್ರನ್ ವರ್ಲ್ಡ್‌ನ ಮಕ್ಕಳ ಹಕ್ಕುಗಳಿಗಾಗಿ ಕಾರ್ಯಕ್ರಮದ ಮೂಲ ತತ್ವ. ವಿವಿಧ ಕ್ಷೇತ್ರಗಳ ವಿವಿಧ ಕೆಲಸಗಳು ಈ ಜಾರಿಗೆ ಪೂರಕವಾಗಿರುವುದು ಇಲ್ಲಿ ಕಂಡು ಬರುತ್ತದೆ. ಹೀಗೆ ಎಲ್ಲ ಕೆಲಸಗಳೂ ಮಕ್ಕಳ ಹಕ್ಕುಗಳ ಕೆಲಸಗಳಾಗುತ್ತವೆ. ಮಕ್ಕಳ ಹಕ್ಕುಗಳನ್ನು ವಾಸ್ತವ ಮಾಡಲು ಹೊರಟಿರುವ ಒಟ್ಟಾರೆ ಗುರಿಗೆ ಪ್ರತಿ ಕೆಲಸವೂ ತನ್ನ ಪಾಲನ್ನು ನೀಡುವ ಮೂಲಕ ಪರಸ್ಪರ ಸಂಪರ್ಕ ಹೊಂದಿದೆ.

ಹೀಗಾಗಿ, ಮಕ್ಕಳ ಹಕ್ಕುಗಳಿಗಾಗಿ ಕಾರ್ಯಕ್ರಮ ಎಂಬುದನ್ನು ಮಕ್ಕಳ ಹಕ್ಕುಗಳನ್ನು ಜಾರಿ ಮಾಡಲು ತೆಗೆದುಕೊಂಡಿರುವ ನಿಷ್ಠೆಯನ್ನು ಆಧರಿಸಿ ನಡೆದಿರುವ ಕಾರ್ಯಕ್ರಮಗಳು ಎನ್ನಬಹುದು. ಇದು ಎಲ್ಲವನ್ನೂ ಒಳಗೊಂಡಿರುವ ಹಾಗೂ ಅಂತರ್ಗತವಾದುದೇ ಹೊರತು 'ಇನ್ನೊಂದು' ಅಥವಾ 'ಜೊತೆಗೆ ಬಂದಿರುವ' ಮತ್ತೊಂದು ಕಾರ್ಯಕ್ರಮವಲ್ಲ. ಇದರ ಒಟ್ಟಾರೆ ಗುರಿ ಮಕ್ಕಳ ಹಕ್ಕುಗಳಿಗೆ ಗೌರವ ಮೂಡಿಸುವಂತಹ ವಾತಾವರಣದ ಸೃಷ್ಟಿ. ಎಲ್ಲ ರೀತಿಯ ಕಾರ್ಯಕ್ರಮಗಳು, ಅದು ಕ್ರಿಯಾತ್ಮಕ ಚಟುವಟಿಕೆಗಳು, ಸಂಶೋಧನೆ, ಮಕ್ಕಳ ಪರವಾದ ವಾದ ಅಥವಾ ಮತ್ತಾವುದೇ ಆಗಿರಲಿ ಈ ಎಲ್ಲವೂ ಒಟ್ಟಾರೆ ಗುರಿಯನ್ನು ಸಾಧಿಸಲು ತಮ್ಮ ಪಾಲನ್ನು ಸಲ್ಲಿಸುವಂತಹದ್ದಾಗಿವೆ.

## ಹಕ್ಕು ಆಧಾರಿತ ಪರಿಸ್ಥಿತಿಗಳ ವಿಶ್ಲೇಷಣೆ

ಮಕ್ಕಳ ಹಕ್ಕುಗಳಿಗಾಗಿ ಕಾರ್ಯಕ್ರಮಗಳನ್ನು ನಿರ್ಮಿಸುವಾಗ ಪರಿಸ್ಥಿತಿಯ ವಿಶ್ಲೇಷಣೆ ಬಹಳ ಮುಖ್ಯ. 'ಮಕ್ಕಳ ಪರಿಸ್ಥಿತಿ ಹೇಗಿದೆ?' 'ಮಕ್ಕಳ ಹಕ್ಕುಗಳ ಸ್ಥಿತಿ ಹೇಗಿದೆ?' 'ಈ ಪರಿಸ್ಥಿತಿಗೆ ಏನು ಮಾಡಲು ಯಾರು ಜವಾಬ್ದಾರರು' ಎಂಬಿವೇ ಪ್ರಶ್ನೆಗಳನ್ನುಕೇಳುವುದು ವಿಶ್ಲೇಷಣೆಗೆ ಪ್ರಯೋಜನಕಾರಿ. ಈ ಕೊನೆಯ ಪ್ರಶ್ನೆ ಎಲ್ಲ ರೀತಿಯ ಮಾನವ ಹಕ್ಕುಗಳಿಗಾಗಿ ಕಾರ್ಯಕ್ರಮದಲ್ಲಿ ಬಹಳ ಮುಖ್ಯ. ಹಕ್ಕುಗಳು ಜವಾಬ್ದಾರಿ ಮತ್ತು ಕರ್ತವ್ಯಗಳನ್ನು ಜೊತೆ ಜೊತೆಗೆ ತರುತ್ತವೆ. ಹೀಗಾಗಿ ಹಕ್ಕುಗಳ ಜಾರಿ ಮಾಡುವುದರ ಅಥವಾ ಮಾಡದಿರುವುದರ ಬಗ್ಗೆ ಯಾರಾದರೂ ವ್ಯಕ್ತಿ ಅಥವಾ ಸಂಸ್ಥೆ ಜವಾಬ್ದಾರಿಯಾಗಲೇಬೇಕು. ಬಹಳಷ್ಟು ಪ್ರಕರಣಗಳಲ್ಲಿ ಮಕ್ಕಳ ಹಕ್ಕುಗಳ ಒಡಂಬಡಿಕೆ ಹಾಗೂ ಇನ್ನಿತರ

ಮಾನವ ಹಕ್ಕುಗಳ ಒಡಂಬಡಿಕೆಗಳಿಗೆ ಸಹಿ ಮಾಡಿ ಅವುಗಳ ಜಾರಿಗಾಗಿ ಒಪ್ಪಿರುವ ಸರಕಾರವೇ ಇದಕ್ಕೆ ಜವಾಬ್ದಾರಿಯಾಗಿದೆ.

ಈ ತರಹದ ವಿಶ್ಲೇಷಣೆ ಮಾಡಲು ಬೇಕಾದ ಬಹಳಷ್ಟು ಮಾಹಿತಿಗಳು ಒಂದೇ ರೀತಿ ಇರುತ್ತವೆ. (ಉದಾ. ಜನಸಂಖ್ಯೆ ಅಥವಾ ಆರ್ಥಿಕ ಮಾಹಿತಿ). ಮಕ್ಕಳ ಹಕ್ಕುಗಳಿಗಾಗಿ ಕಾರ್ಯಕ್ರಮಗಳನ್ನು ಯೋಜಿಸುವ ನಿಟ್ಟಿನಲ್ಲಿ ಕೇಳಬೇಕಾದ ಇನ್ನೊಂದಷ್ಟು ಪ್ರಶ್ನೆಗಳು / ಕ್ರಿಯೆಗಳು ಈ ಮುಂದಿನಂತಿವೆ:

• ಆಯಾ ದೇಶದ ಮಕ್ಕಳ ಪರಿಸ್ಥಿತಿಯ ಬಗ್ಗೆ ಮಾಹಿತಿ ಸಂಗ್ರಹ ಮತ್ತು ತೀರಾ ದುಃಸ್ಥಿತಿಯಲ್ಲಿರುವ ನಿರ್ದಿಷ್ಟ ಗುಂಪುಗಳ ಮಕ್ಕಳನ್ನು ಕುರಿತು ಸರ್ವೇಕ್ಷಣೆ, ಉದಾ : ಹೆಣ್ಣು ಮಕ್ಕಳು, ಅಂಗವಿಕಲರು, ಅನಾಥರು, ನೆಲೆ ತಪ್ಪಿದವರು, ದೇಶಬಿಟ್ಟು ಬಂದಿರುವವರು ಇತ್ಯಾದಿ. ಇಲ್ಲಿ ಇನ್ನೂ ಒಂದು ಪ್ರಮುಖ ಪ್ರಶ್ನೆ ಇದೆ. - ಮಕ್ಕಳ ಪರಿಸ್ಥಿತಿಯ ವಿಶ್ಲೇಷಣೆ ಮಾಡುವಾಗ ಮಕ್ಕಳನ್ನು ಆ ಪ್ರಕ್ರಿಯೆಯಲ್ಲಿ ಒಳಗೊಳ್ಳಲಾಗಿತ್ತೆ?

• ಮಕ್ಕಳ ಹಕ್ಕುಗಳನ್ನು ರಕ್ಷಿಸಿ ಜಾರಿಗೊಳಿಸುವುದು - ಮಕ್ಕಳ ಹಕ್ಕುಗಳನ್ನು ರಕ್ಷಿಸಿ ಜಾರಿ ಮಾಡುವುದು ಯಾರ ಜವಾಬ್ದಾರಿ? ಅವರಿಗೇನಾದರು ಸಹಾಯ, ಬೆಂಬಲ ಬೇಕಿದೆಯೇನು? ಸರಕಾರದ ನೀತಿ ನಿಯಮಗಳಲ್ಲೇನಾದರೂ ತಾರತಮ್ಯವಿದೆಯೆ? ಮಕ್ಕಳ ಹಕ್ಕುಗಳ ಜಾರಿಗಾಗಿ ಸರಕಾರ ಏನಾದರೂ ಕ್ರಮ ಕೈಗೊಂಡಿದೆಯೆ?




• ಮಕ್ಕಳ ಹಕ್ಕುಗಳ ಜಾರಿಯ ಉಸ್ತುವಾರಿ ಮತ್ತು ವರದಿ : ಮಕ್ಕಳ ಹಕ್ಕುಗಳನ್ನು ಗೌರವಿಸಲು ಹಾಗೂ ಹಂತ ಹಂತವಾಗಿ ಜಾರಿಗೊಳಿಸಲು ಎಂತಹ ಉಸ್ತುವಾರಿ ವ್ಯವಸ್ಥೆಯನ್ನು ಮಾಡಲಾಗಿದೆ? ಯಾವುದಾದರೂ ಪ್ರಕ್ರಿಯೆಯಲ್ಲಿ ಸರಕಾರವನ್ನು ಜವಾಬ್ದಾರರನ್ನಾಗಿಸುವ ಸಾಧ್ಯತೆ ಇದೆಯೆ? ವಿಶ್ವ ಸಂಸ್ಥೆಯ ಸಮಿತಿಗೆ ಸ್ವಯಂ ಸೇವಾ ಸಂಸ್ಥೆಗಳು ಪರ್ಯಾಯ ವರದಿ ಸಲ್ಲಿಸಿವೆಯೇ? ಸ್ವಯಂ ಸೇವಾ ಸಂಸ್ಥೆ ಅಥವಾ ಸರ್ಕಾರ ನೀಡಿದ ವರದಿಯಲ್ಲಿ ಹಾಗೂ ಉಸ್ತುವಾರಿಯಲ್ಲಿ ಮಕ್ಕಳ ಭಾಗವಹಿಸುವಿಕೆ ಇತ್ತೆ? ಇನ್ನೂ ಯಾವ ಯಾವ ಮಾನವ ಹಕ್ಕುಗಳ ಒಡಂಬಡಿಕೆಗಳಿಗೆ ಸರ್ಕಾರ ಒಪ್ಪಿ ಸಹಿ ಹಾಕಿದೆ?

• ಮಾಹಿತಿಯಲ್ಲಿ / ತಿಳಿವಳಿಕೆಯಲ್ಲಿ ಇನ್ನೂ ಎಷ್ಟರ ಮಟ್ಟಿಗೆ ಅಂತರವಿದೆ ವಯಸ್ಸು, ಲಿಂಗ, ಭೂ ಪ್ರದೇಶ ಮತ್ತಿತರ ಅಂಶಗಳ ಹಿನ್ನೆಲೆಯಲ್ಲಿ ಮಾಹಿತಿಯನ್ನು ಪ್ರತ್ಯೇಕ ಗೊಳಿಸಲಾಗಿದೆಯೆ?

• **ಮಾನವ ಹಕ್ಕು ಕುರಿತು ದೃಷ್ಟಿ** : ಮಾನವ ಹಕ್ಕುಗಳನ್ನು ಕುರಿತು ಅದರಲ್ಲೂ ಮಕ್ಕಳ ಹಕ್ಕುಗಳನ್ನು ಕುರಿತು ಜನರಲ್ಲಿ ಎಷ್ಟರ ಮಟ್ಟಿಗೆ ಮಾಹಿತಿ ಇದೆ? ಸ್ಥಳೀಯ ಪರಿಸ್ಥಿತಿಗಳಲ್ಲಿ ಹಕ್ಕು ಎಂಬುದು ಅದರಲ್ಲೂ ಮಕ್ಕಳ ಹಕ್ಕು ಎಂಬುದು ಎಷ್ಟರ ಮಟ್ಟಿಗೆ ಸಾಂಸ್ಕೃತಿಕವಾಗಿ ಮತ್ತು / ಅಥವಾ ಭಾಷಾ ಹಿನ್ನೆಲೆಯಲ್ಲಿ ಅರ್ಥ ಮಾಡಿಕೊಂಡಿದ್ದಾರೆ ಮತ್ತು ವಿಶ್ಲೇಷಿಸುತ್ತಾರೆ.

• **ಯೋಜನೆ ನಿರ್ಮಿಸುವಲ್ಲಿ ಮಕ್ಕಳ ಭಾಗವಹಿಸುವಿಕೆಗೆ ಅವಕಾಶ :**

ಯೋಜನೆಯ ಚಿಂತನೆ, ನಿರ್ಮಾಣ, ನಿರ್ವಹಣೆ ಮುಂದೆ ಮೌಲ್ಯಮಾಪನ ಈ ಎಲ್ಲದರಲ್ಲೂ ಮಕ್ಕಳ ಭಾಗವಹಿಸುವಿಕೆ ಇರುವುದು ಸೂಕ್ತ . ಆರಂಭದಿಂದಲೂ ಎಲ್ಲ ಹಂತಗಳಲ್ಲೂ ಮಕ್ಕಳು ಭಾಗವಹಿಸಬೇಕು. ಈ ಪ್ರಕ್ರಿಯೆಯನ್ನು ಈ ರೀತಿ ನೋಡಬಹುದು:

• ಮಕ್ಕಳು ಮತ್ತು ವಯಸ್ಕರ ಮಧ್ಯೆ ಅಧಿಕಾರ ಹಂಚಿಕೆ.

• ಮಕ್ಕಳು ಮತ್ತು ವಯಸ್ಕರು ಪರಸ್ಪರ ಸಮಭಾವದಿಂದ ನೋಡುವ ವ್ಯವಸ್ಥೆ.

ಯೋಜನೆಗಳ ನಿರ್ಮಾಣ, ಕೆಲಸ ಮಾಡುವ ನಿರ್ಧಾರ ಕೈಗೊಳ್ಳಲು ಮುಂದಾಗುವುದಕ್ಕೆ ಮಕ್ಕಳು ಕೆಲವು ಹೊಸ ಕೌಶಲ್ಯಗಳನ್ನು ಹೊಂದಲೇಬೇಕು. ತಮ್ಮ ಅನುಭವಗಳ ಬಗ್ಗೆ ಚಿಂತಿಸಿ ವಿಶ್ಲೇಷಿಸಲು ಸಾಧ್ಯವಾಗಬೇಕು, ಪರ್ಯಾಯ ವ್ಯವಸ್ಥೆ, ಪರಿಹಾರಗಳನ್ನು ಕಾಣಬೇಕು, ನಿರ್ಧಾರ ಕೈಗೊಳ್ಳಬೇಕು ಜೊತೆಗೆ ಇವುಗಳಿಂದಾಗುವ ಪರಿಣಾಮಗಳೇನು ಎಂಬುದರತ್ತಲೂ ಯೋಚಿಸಬೇಕು. ಬಂದ ಫಲಿತಾಂಶಗಳನ್ನು ಮತ್ತೆ ಮತ್ತೆ ವಿಶ್ಲೇಷಿಸಿ ಹೊಸ ಸಾಧ್ಯತೆಗಳನ್ನು ಕಾಣಬಹುದು. ವಯಸ್ಕರೂ ಹೊಸ ಕೌಶಲ್ಯಗಳನ್ನು ಕಲಿಯಬೇಕು. ಸಾಮಾನ್ಯವಾಗಿ ಬಹುತೇಕ

ವಯಸ್ಕರು ಮಕ್ಕಳ ದೃಷ್ಟಿಗೆ ಗಮನ ಕೊಡುವುದಿಲ್ಲ, ತಮ್ಮದೇ ನಡೆಯಬೇಕೆಂಬ ಹಠ ಮಾಡುವ ರೀತಿ ಅಧಿಕಾರ ತೋರುತ್ತಾರೆ ಮತ್ತು ಮಕ್ಕಳ ಬಾಯಿ ಬಡಿಯುತ್ತಾರೆ. ವಯಸ್ಕರ ಮನೋಭಾವದಲ್ಲಿ ಬದಲಾವಣೆ ಬಂದು ಆ ಮೂಲಕ ಮಕ್ಕಳ ಮಾತು ಕೇಳುವ ರೀತಿ ನೀತಿಗಳನ್ನು ಅವರು ಕಲಿಯಬೇಕಿದೆ.

ಹೀಗೆಂದು ಮಕ್ಕಳೊಂದಿಗೆ ಅಧಿಕಾರ ಹಂಚಿಕೆಯೆಂದರೆ ಅವರು ಹೇಳುವುದೆಲ್ಲಾ ವೇದವಾಕ್ಯವೆಂದೇನಲ್ಲ. ಮಕ್ಕಳ ಭಾಗವಹಿಸುವಿಕೆಯ ಬಗ್ಗೆ ಬರೆದಿರುವ ಅನೇಕ ಪುಸ್ತಕಗಳು 'ಮಕ್ಕಳ ದನಿ'ಗೆ ಪ್ರಾಮುಖ್ಯತೆ ನೀಡಲು ಹೇಳಿವೆ, ಮಕ್ಕಳಿಗೇನೂ ವಿಶೇಷ ಅಂತರಂಗದ ದೃಷ್ಟಿ ಇದೆಯೇನೋ ಎಂಬಂತೆ. ಮಕ್ಕಳನ್ನು ಕುರಿತು ಹೊಸ ದೃಷ್ಟಿಯಿಂದ ನೋಡುತ್ತಿರುವುದಾಗಿ ಈ ಪುಸ್ತಕಗಳು ಹೇಳಿದರೂ, ಈ ಯಾವುವೂ ಮಕ್ಕಳು ಮುಗ್ಧರು ಮತ್ತು ಪ್ರಕೃತಿಗೆ ಹತ್ತಿರವಾದವರು ಎನ್ನುವ ಮನೋಭಾವನೆಯಿಂದೇನೂ ಹೊರಬಂದಿಲ್ಲ. ಸ್ಪಷ್ಟವಾಗಿ ಹೇಳಬೇಕೆಂದರೆ, ಹಲವಾರು ಪ್ರಗತಿಶೀಲ ನಿರ್ಧಾರಗಳನ್ನು ಕೈಗೊಳ್ಳಲು ಮಕ್ಕಳನ್ನು ವಯಸ್ಕರು ಕೈಹಿಡಿದು ಕರೆದೊಯ್ಯಬೇಕು. ಇದು ಪರಸ್ಪರರಿಗೆ ಕಲಿಯುವ ಪ್ರಕ್ರಿಯೆ ಎಂಬುದು ಮುಖ್ಯವೇ ಹೊರತು, ಮಕ್ಕಳನ್ನು ವಯಸ್ಕರು ಪೋಷಿಸುವ ಹಾಗೂ ಮಕ್ಕಳು ಯಾವಾಗ ನಿರ್ಧಾರ ಮಾಡಲು, ಜವಾಬ್ದಾರಿ ತೆಗೆದುಕೊಳ್ಳಲು ಸಿದ್ಧರಾಗುವರು ಎಂದು ನಿರ್ಧರಿಸುವುದಕ್ಕಲ್ಲ.

**ಸೇವ್ ದಿ ಚಿಲ್ಡ್ರನ್ (ಯು.ಕೆ.) ಹಾಗೂ ಮಕ್ಕಳ ಹಕ್ಕುಗಳು**

ಮಕ್ಕಳ ಹಕ್ಕುಗಳ ಬೆಳವಣಿಗೆಯಲ್ಲಿ ಸೇವ್ ದಿ ಚಿಲ್ಡ್ರನ್ (ಯು.ಕೆ.)ಗೆ ವಿಶೇಷವಾದ ಸಂಬಂಧವಿರುವುದರಿಂದ ಈ ಕ್ಷೇತ್ರದ ಕೆಲಸದಲ್ಲಿಯೂ ಇದಕ್ಕೆ ನಿರ್ದಿಷ್ಟವಾದ ಜವಾಬ್ದಾರಿ ಇದೆ. 1919ರಲ್ಲಿ ಸೇವ್ ದಿ ಚಿಲ್ಡ್ರನ್ (ಯು.ಕೆ.) ಅನ್ನು ಸ್ಥಾಪಿಸಿದ ಎಗ್ಲಾಂಟೈನ್ ಜೆಬ್, ನಾಲ್ಕು ವರ್ಷಗಳ ನಂತರ ಮೊತ್ತಮೊದಲ ಬಾರಿಗೆ ವಿಶೇಷವಾದ ಮಕ್ಕಳ ಮಾನವ ಹಕ್ಕುಗಳ ಹೇಳಿಕೆಯನ್ನು ಸಿದ್ಧಿಪಡಿಸಿದರು. ಅದೇ ಜಿನಿವಾದಲ್ಲಿ ಘೋಷಿತವಾದ ಮಕ್ಕಳ ಹಕ್ಕುಗಳು. ಈ ಘೋಷಣೆಯನ್ನು 1925ರಲ್ಲಿ ಲೀಗ್ ಆಫ್ ನೇಷನ್ಸ್ ಒಪ್ಪಿಕೊಂಡಾಗ ಇದಕ್ಕೆ ಅಂತಾರಾಷ್ಟ್ರೀಯ ಮನ್ನಣೆ ಸಿಕ್ಕಿತು. ಇದಾಗಿ 35 ವರ್ಷಗಳಾದ ಮೇಲೆ ವಿಶ್ವ ಸಂಸ್ಥೆಯು ಈಗ ಮಕ್ಕಳ ಹಕ್ಕುಗಳ ಒಡಂಬಡಿಕೆಯೆಂದೇ ಹೆಸರಾಗಿರುವ ಇದನ್ನೇ ಮಾನ್ಯ ಮಾಡಿತು. ಹೇರಳವಾದ ಸಂಪನ್ಮೂಲಗಳಿದ್ದರೂ ಕೇವಲ ಒಂದೇ ಸಂಸ್ಥೆಯಿಂದ ಈ ಎಲ್ಲವನ್ನೂ ಸಾಧಿಸಲು ಇರುವ ಮಿತಿಗಳು ಎಗ್ಲಾಂಟೈನ್ ಜೆಬ್‌ಗೆ ತಿಳಿದಿತ್ತೆಂದೇ ಆಕೆ ಇದನ್ನು ಮಾಡಲು ಕಾರಣ.

ಈಗ ಸೇವ್ ದಿ ಚಿಲ್ಡ್ರನ್ ವರ್ಲ್ಡ್ (ಯು.ಕೆ.) ಮಕ್ಕಳ ಮಾನವ ಹಕ್ಕುಗಳನ್ನು ಜಾರಿಮಾಡಲು ಹಾಗೂ ಮಕ್ಕಳ ಹಕ್ಕು ಕುರಿತು ವ್ಯಾಪಕವಾದ ಪ್ರಸಾರ, ಸಾಮರ್ಥ್ಯ ನೀಡುವ ಕೆಲಸ ಹಾಗೂ ನ್ಯಾಯಕ್ಕಾಗಿ ಒತ್ತಾಯಿಸಲು ಮುಂಚೂಣಿಯಲ್ಲಿರುವ ಸಂಸ್ಥೆಯಾಗಿದೆ. ಭಾರತ ಸರಕಾರವೇ ಅಲ್ಲದೆ ವಿವಿಧ ಸಹ ಸಂಸ್ಥೆಗಳೊಡನೆ ಸೇವ್ ದ ಚಿಲ್ಡ್ರನ್ (ಯು.ಕೆ.) ನಮ್ಮ ದೇಶದ 11 ರಾಜ್ಯಗಳಲ್ಲಿ ಕಾರ್ಯ ನಿರತವಾಗಿದೆ. ಭಾರತದಲ್ಲಿ ನಮ್ಮ ಕಾರ್ಯಕ್ರಮಗಳು ಬಡ ಮೂಲ ನಿವಾಸಿಗಳು, ಪರಿಶಿಷ್ಟ ಜಾತಿ, ಪಂಗಡ, ಬುಡಕಟ್ಟುಗಳಿಗೆ, ಸೇರಿದ ಮಕ್ಕಳಿಗೆ, ದುಸ್ಥಿತಿಯಲ್ಲಿರುವ ಭೂ ರಹಿತ, ಅಲೆಮಾರಿ ಮತ್ತು ವಿಕಲಾಂಗ ಮಕ್ಕಳಿಗೆ ಸಹಾಯ ಮಾಡುವ ಕೆಲಸಗಳಲ್ಲಿ ಕೇಂದ್ರೀಕೃತವಾಗಿದೆ. ನಮ್ಮ ಕೆಲಸಗಳು ನಮ್ಮನ್ನು ಅತ್ಯಂತ ದೂರ ದೂರವೂ ತಲುಪಲು ದುರ್ಗಮವೂ ಆದಂತಹ ಬೆಟ್ಟ ಗುಡ್ಡ, ಪರ್ವತ, ಕಾಡು, ಸಮುದ್ರ ತೀರ, ಮರುಭೂಮಿ, ಮೊದಲಾದ ಪ್ರದೇಶಗಳಿಗೆ ಒಯ್ದಿದೆ. ಭಾರತದಲ್ಲಿ ನಮ್ಮ ಕೇಂದ್ರ ಕಛೇರಿಯು ದೆಹಲಿಯಲ್ಲಿವೆ. ಇದರೊಂದಿಗೆ ನಮ್ಮ ಪ್ರಾಂತೀಯ ಕಛೇರಿಗಳು ಜೈಪುರ, ಲೇಹ್, ಕಲ್ಕತ್ತಾ ಮತ್ತು ಹೈದರಾಬಾದ್‌ಗಳಲ್ಲಿವೆ. ಇದರೊಡನೆ ಭಾರತದ ಸೇವ್ ದ ಚಿಲ್ಡ್ರನ್ (ಯು.ಕೆ.) ಕಛೇರಿಯಲ್ಲಿ ಟಿಬೆಟ್ಟಿನ ದೇಶ ಭ್ರಷ್ಟರ ಪುನರ್ವಸತಿ ಹಾಗೂ ಮಕ್ಕಳಿಗೆ ಸಹಾಯ ಕಾರ್ಯಕ್ರಮಗಳಿಗಾಗಿ ಇಬ್ಬರು ಅಧಿಕಾರಿಗಳಿದ್ದಾರೆ.

ಮುಂದಿನ ಐದು ವರ್ಷಗಳಿಗೆ ತನ್ನ ರಾಷ್ಟ್ರೀಯ ಕಾರ್ಯ ಯೋಜನೆಯನ್ನು ಸಿದ್ಧಪಡಿಸುವಲ್ಲಿ ಈಗ ಸೇವ್ ದ ಚಿಲ್ಡ್ರನ್ (ಯು.ಕೆ.) ನಿರತವಾಗಿದೆ. ನಮ್ಮ ಮೊದಲ ಪಂಚ ವಾರ್ಷಿಕ ಯೋಜನೆಯು 1999ರಲ್ಲಿ ಮುಗಿಯಿತು.

ಮುಂದಿನ ಶತಮಾನವನ್ನು ಇನ್ನೂ ಉತ್ತಮವಾದ ಹಾಗೂ ಮಕ್ಕಳ ಹಕ್ಕುಗಳನ್ನು ಜಾರಿ ಮಾಡಲು ಹೊಸ ರೀತಿಯ ಉತ್ಸಾಹದೊಂದಿಗೆ ಪ್ರವೇಶಿಸುವ ಆಸೆ ನಮ್ಮದು. ಎಲ್ಲ ಸಮಸ್ಯೆಗಳಿಗೆ ನಮ್ಮ ಬಳಿ ಸಿದ್ಧ ಉತ್ತರಗಳಿವೆಯೆಂದೇನೂ ಅಲ್ಲ. ನಾವು ಈ ಪ್ರಕ್ರಿಯೆಯಲ್ಲಿ ಸಾಕಷ್ಟು ಕಲಿತಿದ್ದೇವೆ, ಕಲಿತಿದ್ದರಲ್ಲಿ ಮರೆಯಬೇಕಾದುದನ್ನು ಮರೆತಿದ್ದೇವೆ. ಮಾಡಬೇಕಾದ ಕೆಲಸಗಳು ಇನ್ನೂ ಬೇಕಾದಷ್ಟಿದೆ. ಇದೊಂದು ಸವಾಲು ನಿಜ, ಆದರೆ ಬಹಳ ಆಸಕ್ತಿದಾಯಕವಾದ ಸವಾಲು. ಮಕ್ಕಳ ಹಕ್ಕುಗಳನ್ನು ಜಾರಿ ಮಾಡಲು ಇನ್ನೂ ಕೋಟ್ಯಾಂತರ ಸಂದೇಶಗಳು ಬಂದರೂ ಸಾಲದು. ಆದರವು ಬರುತ್ತಲೇ ಇರಬೇಕು..... ಮತ್ತೆ ಮತ್ತೆ...... ಸದಾ ಕಾಲ......

*ಆಕರ :*


Guidelines to Children's Right Programming, draft paper, Bill Bell, Save the Children (UK) 1999

* A Chance in Life - Principles and Practices in Basic Primary Education for Children, Kimberly Ogadhoh & Mairon Molteno, Save the Children (UK), 1998

* Public Report on Basic Education, the PROBE team, 1999.



**ಆಶಾ ಬ್ಯಾನರ್ಜಿ, ಕಲ್ಕತ್ತಾದ ಸೇವ್ ದ ಚಿಲ್ಡ್ರನ್ ಸಂಸ್ಥೆಯ ವಿಭಾಗದ ಮುಖ್ಯಸ್ಥರು.**

**ಅನುವಾದ : ವಾಸುದೇವ ಶರ್ಮಾ**


ಮಕ್ಕಳ ಮೇಲಿ
ವ್ಯಾಪಾರೀ ಲೈಂಗಿಕ ದೌರ್ಜನ್ಯ
ಮತ್ತು
ವ್ಯಾಪಾರಿ ಲೈಂಗಿಕ ದೌರ್ಜನ್ಯಕ್ಕೆ
ಬಲಿಯಾಗಿರುವ ಮಕ್ಕಳು
- ಪ್ರೀತಿ ಪಾಟ್ಕರ್ ಮತ್ತು ಪ್ರವೀನ್ ಪಾಟ್ಕರ್

''ಪ್ರತಿ ಬಾರಿ ಮಗುವೊಂದು 'ನನಗೆ ದೇವತೆಗಳಲ್ಲಿ ನಂಬಿಕೆಯಿಲ್ಲ' ಎಂದಾಗ ಪುಟ್ಟದೊಂದು ದೇವತೆ ಎಲ್ಲೋ ಸತ್ತು ಬೀಳುತ್ತದೆ''

- ಸರ್ ಜೆ.ಎಂ.ಬ್ಯಾರಿ

ಪ್ರತಿ ವರ್ಷ ಸುಮಾರು ಒಂದು ಮಿಲಿಯನ್ ಮಕ್ಕಳನ್ನು ಲೈಂಗಿಕ ವ್ಯಾಪಾರಕ್ಕೆ ತಳ್ಳಲಾಗುತ್ತಿದೆ. ಹೆಂಗಸರು ಮತ್ತು ಮಕ್ಕಳ ಮೇಲೆ ಸೂಳೆಗೇರಿಗಳಲ್ಲಿ, ಬೀದಿಗಳಲ್ಲಿ, ರಜಾ ವಿಹಾರಧಾಮಗಳಲ್ಲಿ, ಸಮುದ್ರ ತೀರ ಮತ್ತಿತರ ಇದೇ ರೀತಿಯ ಸ್ಥಳಗಳಲ್ಲಿ ವ್ಯಾಪಾರೀ ಲೈಂಗಿಕ ಶೋಷಣೆ (Commercial Sexual Exploitation-CSE) ನಡೆದಿದೆ. ಭಾರತದೇಶ ಒಂದರಲ್ಲೇ 4,00,000ಕ್ಕೂ ಅಧಿಕ ಮಕ್ಕಳು ವ್ಯಾಪಾರೀ ಲೈಂಗಿಕ ಶೋಷಣೆಗೆ ಗುರಿಯಾಗಿದ್ದಾರೆ. ಇವರಲ್ಲಿ ಬಹುತೇಕರು ಹಿಂದುಳಿದ ಗ್ರಾಮೀಣ ಪ್ರದೇಶಗಳ, ಅದರಲ್ಲೂ ಆರ್ಥಿಕ ಶ್ರೇಣೀಕೃತ ಸಮಾಜದ ಅತ್ಯಂತ ಕಟ್ಟಕಡೆಯಲ್ಲಿರುವ ಬಡ ಸಮುದಾಯಕ್ಕೆ ಸೇರಿದವರು. ಸೂಳೆಗಾರಿಕೆಗೆ ಮಕ್ಕಳೇ ಬೇಕೆನ್ನುವ ಬೇಡಿಕೆ ಸದಾ ಹೆಚ್ಚುತ್ತಿದೆ. ಇಂತಹ ಬೇಡಿಕೆ ಈಗ ಕೇವಲ ವಿದೇಶೀ ಪ್ರವಾಸಿಗರಿಂದ ಮಾತ್ರಾ ಎನ್ನುವಂತಿಲ್ಲ. ಸ್ಥಳೀಯ ಗಂಡಸರೂ ಸಹ ಲೈಂಗಿಕ ವ್ಯವಹಾರಗಳಿಗೆ ಮಕ್ಕಳೇ ಬೇಕೆನ್ನುತ್ತಿದ್ದಾರೆ. ಬೀದಿಯ ಮೇಲೆ ಬದುಕುವ ಮಕ್ಕಳು, ವೇಶ್ಯೆಯರ ಮಕ್ಕಳು, ಅಂಗವಿಕಲ ಮಕ್ಕಳು, ಭಿಕ್ಷೆ ಬೇಡುವ ಮಕ್ಕಳು ಮತ್ತು ಭಿಕ್ಷುಕರ ಮಕ್ಕಳು; ನೈಸರ್ಗಿಕ ದುರಂತಗಳು ಹಾಗೂ ಮತ್ತೆ ಮತ್ತೆ ಬರಗಾಲಕ್ಕೀಡಾದ ಪ್ರದೇಶಗಳ ಕುಟುಂಬಗಳ ಮಕ್ಕಳು ; ದೊಂಬಿ, ಯುದ್ಧ, ಅಥವಾ ಜನಾಂಗೀಯ ಹಿಂಸೆಗಳಿಗೆ ಬಲಿಯಾದ ಕುಟುಂಬಗಳ ಮಕ್ಕಳು ; ತಂದೆ ತಾಯಿಯರಿಂದ ದೂರವಾಗಿ ಬೇರೆ ಕಡೆ ವಾಸ ಮಾಡುವ ಮಕ್ಕಳು ಇವರೆಲ್ಲರೂ ವ್ಯಾಪಾರೀ ಲೈಂಗಿಕ ಶೋಷಣೆಗೆ ಈಡಾಗಬಹುದಾದ ಮಕ್ಕಳೇ ಆಗಿದ್ದಾರೆ. ಜಗತ್ತಿನಾದ್ಯಂತ ನಡೆದಿರುವ ಇಂತಹ ಶೋಷಣೆಗೂ ಕುಟುಂಬಗಳ ಆದಾಯದ ಮಟ್ಟಕ್ಕೂ ನೇರವಾದ ಸಂಬಂಧವಿದೆ ಎಷ್ಟೋ ಪ್ರಕರಣಗಳಲ್ಲಿ ಸೂಳೆಗಾರಿಕೆಯಿಂದ ಮಗು ತರುವ ಹಣವೇ ಬಡ ಕುಟುಂಬಗಳ ಆದಾಯವಾಗಿರುವ ಸಂಭವವೂ ಇದೆ.

**ಬಾಲ್ಯ ವೇಶ್ಯಾವೃತ್ತಿ : ಪದದ ಬಳಕೆ**

ವಯಸ್ಕರು ಮಕ್ಕಳನ್ನು ವೇಶ್ಯಾವೃತ್ತಿಗೆ ಇಳಿಸುವ ಪ್ರಕ್ರಿಯೆಗೆ ಈ ಪದದ ಬಳಕೆ ಸಾಮಾನ್ಯವಾಗಿ ಆಗುತ್ತಿದೆ. ಆದರೆ ಸಾಮಾನ್ಯವಾಗಿ ವಾಡಿಕೆಯಲ್ಲಿರುವ ಈ ಪದ ಇಂತಹ ಅರ್ಥ ನೀಡುವುದಿಲ್ಲ. 'ಬಾಲ್ಯ ವೇಶ್ಯಾವೃತ್ತಿ' ಎನ್ನುವುದು ಈ ಪ್ರಕ್ರಿಯೆಯಲ್ಲಿ ತಪ್ಪಾಗಿ ಬಳಕೆಯಾಗುತ್ತಿದೆ. ಇದು ಹೆಂಗಸರ ವ್ಯಾಪಾರೀ ಲೈಂಗಿಕ ಶೋಷಣೆಯ ಮೂಲಕ ಹೆಂಗಸರನ್ನು ಲೈಂಗಿಕ ಜೀತದಾಳನ್ನಾಗಿಸುವುದನ್ನು ಕೇವಲ ಸೂಳೆಗಾರಿಕೆ ಎಂದು ಬಳಸಿದಂತೆಯೇ ಆಗಿದೆ. ಎಲ್ಲೋ ಒಂದಷ್ಟು ಹೆಂಗಸರು ಸ್ವತಂತ್ರ್ಯವಾಗಿ ಸ್ವ ಇಚ್ಛೆಯಿಂದ ವೇಶ್ಯಾವೃತ್ತಿಯ ಜೀವನ ನಡೆಸಿರಬಹುದು. ಆದರೆ ಇಂತಹ ಸಾಧ್ಯತೆ ಮಕ್ಕಳಲ್ಲಿ ಇಲ್ಲವೇ ಇಲ್ಲ. ಹೀಗಾಗಿ 'ಬಾಲ್ಯ ವೇಶ್ಯಾವೃತ್ತಿ' ಎನ್ನುವ ಬಳಕೆ ಶುದ್ದಾಂಗ ತಪ್ಪು. ಬಾಲ್ಯ ವೇಶ್ಯಾವೃತ್ತಿ ಎಂಬ ಪದದ ಬಳಕೆಯನ್ನು ಖಂಡತುಂಡವಾಗಿ ವಿರೋಧಿಸಬೇಕು ಮತ್ತು ಎದುರಿಸಬೇಕು. ಈ ಪದವು ನಿಜವಾದ ಪರಿಸ್ಥಿತಿಯನ್ನು ಮರೆಮಾಚುವುದಲ್ಲದೆ ಮಕ್ಕಳ ಮೇಲೆ ವಾಣಿಜ್ಯ ಲೈಂಗಿಕ ಶೋಷಣೆಗೆ ಮನ್ನಣೆ ನೀಡಲೂ ಯತ್ನಿಸುವುದು. ಜೊತೆಗಿದು ಮಕ್ಕಳನ್ನು ರಕ್ಷಿಸಲು ನಮ್ಮ ಸಮಾಜದ ಸೋಲೂ ಸಹ ಆಗಿದೆ.

**ವ್ಯಾಪಾರೀ ಲೈಂಗಿಕ ಶೋಷಣೆಗೀಡಾದವರ ಮಕ್ಕಳು.**

ಮಕ್ಕಳನ್ನು ಸೂಳೆಗಾರಿಕೆಗೆ ತಳ್ಳಲು ಅತ್ಯಂತ ಸುಲಭವೂ ಸುಲಲಿತವೂ (ಆದರೆ ಕಾನೂನಿಗೆ ವಿರುದ್ಧವಾದುದು) ಮತ್ತು ಅತ್ಯಂತ ಕಡಿಮೆ ಪ್ರತಿರೋಧ ಎದುರಿಸಿರುವ ದಾರಿಯೆಂದರೆ ಎರಡನೆ ತಲೆಮಾರಿನ ವೇಶ್ಯೆಯರು. ಅಂದರೆ ವೇಶ್ಯೆಯರ ಮಕ್ಕಳನ್ನು ಲೈಂಗಿಕ ದಾಸ್ಯಕ್ಕೆ ದೂಡುವುದು. ವೇಶ್ಯೆಯ ಮಗಳು ವೇಶ್ಯೆಯಾಗುವುದು ಅತ್ಯಂತ ಸಾಮಾನ್ಯವೆಂದೇ ಹೇಳಲಾಗುತ್ತದೆ. ಇಂತಹವರ ಮಗು ಎಂಬ ಒಂದೇ ಕಾರಣ ಅವಳ ಬದುಕನ್ನೇ ಮೊಟಕುಗೊಳಿಸುವುದು. ಆ ಮಗುವಿನ ದುರುಪಯೋಗ ಆರಂಭಿಕ ಬಾಲ್ಯದಿಂದಲೇ ಶುರುವಾಗುತ್ತದೆ.

ಈ ಮಕ್ಕಳು ಸೂಳೆಗೇರಿಯ ಮೇಲೆ ಯಾವುದೇ ರೀತಿಯ ಅಧಿಕಾರವಿಲ್ಲದ ಆದರೆ ಅಲ್ಲೇ ವಾಸಿಸುವ ತಾಯಂದಿರೊಡನಿರುವರು. ಸಂಜೆಯಾಗುತ್ತಿದ್ದಂತೆಯೇ ಎಲ್ಲ ಸೂಳೆಗೇರಿಗಳು ಗಿರಾಕಿಗಳನ್ನು ಎದುರುಗೊಳ್ಳಲು ಸಿದ್ಧವಾಗುತ್ತಿದ್ದಂತೆಯೇ ಅಲ್ಲಿರುವ ಮಕ್ಕಳೆಲ್ಲಾ ಸಮಸ್ಯೆಗಳೇ ಆಗಿಬಿಡುತ್ತಾರೆ. ಗಿರಾಕಿಗಳಿಗೆ ಕಾಫಿ, ಟೀ, ಪಾನ್ ತಂದು ಕೊಡುವ ಕೆಲಸ ಮಾಡುವುದಾದರೆ ಅವರಿರಲು ಅಡ್ಡಿಯಿಲ್ಲ. ಆ ಮಕ್ಕಳ ತಾಯಂದಿರಿಗೆ ರಾತ್ರಿ ಬಹುಹೊತ್ತಿನವರೆಗೂ ಬಿಡುವಿರುವುದಿಲ್ಲ. ಸೂಳೆಗೇರಿಯೊಳಗೆ ಹೋಗಲಾಗದೆ ಈ ಮಕ್ಕಳು ಬೀದಿಯಲ್ಲೋ ಇಲ್ಲವೇ ಕೆಂಪು ದೀಪದ ಪ್ರದೇಶದ ಭಯಂಕರ ವಾತಾವರಣದ ನಡುವೆಯೇ ಯಾವುದೋ ಅಂಗಡಿಯ ಮೂಲೆಯಲ್ಲಿ ಒರಗಿ ನಿದ್ದೆ ಮಾಡುವರು.

ತೀರಾ ಬೀದಿಗೆ ತಳ್ಳಲಾಗದಷ್ಟು ಪುಟ್ಟ ಮಕ್ಕಳಾಗಿದ್ದಲ್ಲಿ ತಾಯಿ ಗಿರಾಕಿಗೆ ಮೈ ಒಡ್ಡುತ್ತಿರುವ ಮಂಚದ ಕೆಳಗೇ ಮಲಗಬೇಕಾಗುವುದು. ಮಗು ಮಧ್ಯದಲ್ಲಿ ಏಳುವುದು, ತಾಯಿ ಬೇಕು, ಹಾಲು ಬೇಕು ಎಂದು ಗದ್ದಲವೆಬ್ಬಿಸದಿರಲು ಪ್ರತಿ ರಾತ್ರಿ ಮಗುವಿಗೆ ಓಪಿಯಂ ಹಾಕುವರು. ಕೆಂಪುದೀಪದ ಪ್ರದೇಶದಲ್ಲಿ ಬೆಳೆದ ಅನೇಕ ಮಕ್ಕಳು ಬಹುದೀರ್ಘ ಕಾಲ ಮಾದಕ ವಸ್ತುಗಳಿಗೆ ತುತ್ತಾದವರು. ಹೊರ ಜಗತ್ತಿನೊಡನೆ ಈ ಮಕ್ಕಳು ವ್ಯವಹರಿಸಿದರೆ ಅವರನ್ನು ತೀರಾ ಕೀಳಾಗಿ, ವ್ಯಂಗ್ಯವಾಗಿ ನೋಡಲಾಗುತ್ತದೆ. ಆ ಮಕ್ಕಳು ಕೆಂಪು ದೀಪದ ಪ್ರದೇಶದಲ್ಲಿಯೇ ಇದ್ದರೆ, ತಲೆ ಹಿಡಿಕರು, ಮಧ್ಯವರ್ತಿಗಳು ಮತ್ತು ದಾದಾಗಳೇ ಅವರಿಗೆ ಮಾದರಿಗಳಾಗುತ್ತಾರೆ. ಹುಡುಗಿಯರು ಬಹಳ ಸಹಜವಾಗಿ ತಾಯಿಸ್ಥಾನದಲ್ಲಿ ವೇಶ್ಯೆಯಾಗಲು ಪುಸಲಾವಣೆಯಾದರೆ, ಹುಡುಗರು ತಲೆಹಿಡುಕರಂತಾಗುವರು. ಗಿರಾಕಿಗಳು ಪುಟ್ಟ ಹುಡುಗಿಯರಿಗೆ ಲೈಂಗಿಕ ಶೋಷಣೆ ಮಾಡೇ ಮಾಡುವರು. 13 ವರ್ಷವಾಗುತ್ತಿದ್ದಂತೆಯೇ ಗಿರಾಕಿಗಳಿಗೆ ಸೇವೆ ಸಲ್ಲಿಸಲು ಹುಡುಗಿಯನ್ನು ಸಿದ್ಧಮಾಡಲಾಗುತ್ತದೆ.

**ಟ್ರಾಫಿಕಿಂಗ್ (ಸಾಗಣೆ) ಎಂದರೇನು?**

ವಿಶ್ವ ಸಂಸ್ಥೆಯ 1994ರ ಸಾಮಾನ್ಯ ಸಭೆಯಲ್ಲಿ ಸಾಗಣೆಯನ್ನು ಈ ಮುಂದಿನಂತೆ ವ್ಯಾಖ್ಯಾನಿಸಿದೆ, ''ಅಭಿವೃದ್ಧಿ ಹೊಂದುತ್ತಿರುವ ಹಾಗೂ ಆರ್ಥಿಕವಾಗಿ ದುಸ್ಥಿತಿಯಲ್ಲಿರುವ ದೇಶಗಳ ಗಡಿಯಿಂದಾಚೆಗೆ ಕಾನೂನಿಗೆ ವಿರುದ್ಧವಾಗಿ ಹಾಗೂ ಅನುಮಾನಾಸ್ಪದವಾಗಿ ನಡೆಯುವ ಓಡಾಟ ಹಾಗೂ ಇಂತಹ ಓಡಾಟದ ಅಂತಿಮಗುರಿ ಹೆಂಗಸರು ಮತ್ತು ಮಕ್ಕಳನ್ನು ಲೈಂಗಿಕ ಹಾಗೂ ಆರ್ಥಿಕ ಶೋಷಣೆ ಹಾಗೂ ಬಲಾತ್ಕಾರಗಳಿಗೆ ದೂಡಿ ಇಂತಹವರನ್ನು ಹಿಡಿದು ತರುವವರಿಗೆ, ಮಾರುವ, ಕೊಳ್ಳುವ, ಸಾಗಿಸುವ, ಅಪರಾಧೀ ಕೂಟಗಳಿಗೆ ಲಾಭ ಮಾಡಿಕೊಳ್ಳುವ ಚಟುವಟಿಕೆಗಳನ್ನು ಇದರಲ್ಲಿ ಗುರುತಿಸಲಾಗಿದೆ. ಇದರೊಂದಿಗೆ ಬಲವಂತವಾಗಿ ಗೃಹಕೃತ್ಯದಲ್ಲಿ, ಸುಳ್ಳು ಮದುವೆ, ಮೋಸದ ದತ್ತು ಹಾಗೂ ಅನುಮಾನಾಸ್ಪದವಾದ ಕೆಲಸಕ್ಕೆ ನೇಮಕ ಇವೇ ಮೊದಲಾದ ಕಾನೂನಿಗೆ ವಿರುದ್ಧವಾದ ಚಟುವಟಿಕೆಗಳಿಗೂ ಇದು ಅನ್ವಯಿಸುತ್ತದೆ.

**ಚರಿತ್ರೆ**

ಮಕ್ಕಳನ್ನು ಲೈಂಗಿಕ ಶೋಷಣೆಗೆ ಬಲಿಯಾಗಿಸುವ ಪದ್ಧತಿಯೇನೂ ಹೊಸತಲ್ಲ. ಭಾರತದಲ್ಲಿ ನೂರಾರು ವರ್ಷಗಳಿಂದ ನಡೆದು ಬಂದಿರುವ ದೇವದಾಸಿ, ಕುಡಿಕಾರರು, ಭೋಗಂವಂಡ್ಲು, ತೇವಾದಿಯರ್, ಮುರಳಿ ಮತ್ತಿತರ ದೇವಾಲಯ ಆಧಾರಿತ ವೇಶ್ಯೆಯರ ಪದ್ಧತಿ ಹೆಂಗಸರು ಹಾಗೂ ಮಕ್ಕಳನ್ನೇ ಪ್ರಮುಖವಾಗಿ ಗುರಿಯಾಗಿರಿಸಿಕೊಂಡಿರುವುದು ಚಾರಿತ್ರಿಕ ಸತ್ಯ. ಹೆಣ್ಣು ಮಕ್ಕಳು ಋತುಮತಿಯರಾಗುವ ಮೊದಲೇ ಪುಟ್ಟ ಮಕ್ಕಳನ್ನು ದೇವದಾಸಿಯರನ್ನಾಗಿಸುವರು. ದೇವದಾಸಿಯರಿಗೆ ಆಶ್ರಯ ನೀಡುವ ಗಂಡಸರ ಆರ್ಥಿಕ ಪರಿಸ್ಥಿತಿ ಇವರು ಬೇರೆ ಗಿರಾಕಿಗಳಿಗೂ ಸೇವೆ ಸಲ್ಲಿಸಬೇಕೇ ಬೇಡವೋ ಎಂಬುದನ್ನು ನಿರ್ಧರಿಸುತ್ತದೆ. ಈ ಹುಡುಗಿಯರು ಪರಿಶಿಷ್ಟ ಜಾತಿಗೆ ಸೇರಿದವರಾಗಿದ್ದು ಅವರ ಆಶ್ರಯದಾತರು ಕೃಷಿಕ ಸಮಾಜದ ಸಾಹುಕಾರರಾಗಿರುವುದು ಸಾಮಾನ್ಯ.

ಕಾರ್ಕಾನೀಸ್ ಹೇಳುವಂತೆ, '..... ಈ ಸಂಪ್ರದಾಯಕ್ಕೆ ಮೂರನೆಯ ಹಾಗೂ ಪ್ರಬಲ ಕಾರಣ ವಿವಿಧ ರೀತಿಯಿಂದ ಆರ್ಥಿಕ ಸಂಪಾದನೆ', ಹರಿಜನ ಕುಟುಂಬದಲ್ಲಿ ಕೇವಲ ಒಬ್ಬಳು ಹೆಣ್ಣು ಮಗಳಿದ್ದು ಗಂಡು ಮಕ್ಕಳಿಲ್ಲದಿದ್ದಲ್ಲಿ, ಆ ಹುಡುಗಿ ಮದುವೆಯಾಗಿ ಹೋಗಿಬಿಟ್ಟರೆ, ತಂದೆಯ ಕಡೆಯ ಬಂಧುಗಳು ತಮ್ಮ ಭೂಮಿಕಾಣಿಯನ್ನು ಹೊಡೆದು ಬಿಡುತ್ತಾರೆ ಎಂದು ಭಯ ಪಡುವರು. ಇದನ್ನು ತಡೆಯಲಿರುವ ಸುಲಭ ಉಪಾಯ ಗಂಡು ಮಗುವೊಂದನ್ನು ದತ್ತು ತೆಗೆದುಕೊಳ್ಳವುದು. ಇನ್ನೊಂದು ದಾರಿಯೆಂದರೆ ಹೆಣ್ಣುಮಗುವನ್ನು ದೇವರಿಗೆ ಬಿಡುವುದು. ಆ ಹುಡುಗಿಗೆ ಮದುವೆಯೇ ಇಲ್ಲ. ಆಗ ಆ ಹುಡುಗಿ ತನ್ನ ತಂದೆಯ ಎಲ್ಲ ಆಸ್ತಿ ಪಾಸ್ತಿಗಳಿಗೆ ವಾರಸುದಾರಳಾಗುವ (ಗಂಡು) ಮಗುವಂತಾಗುವಳು. ಅನೇಕ ಪ್ರಕರಣಗಳಲ್ಲಿ ಇಂತಹ ಪರಿಸ್ಥಿತಿ ತಮ್ಮ ಮಗಳನ್ನೇ ಸೂಳೆಗಾರಿಕೆಗೆ ತಂದೆ ತಾಯಿಗಳು ದೂಡುವಂತಾಗುವುದು. '' ಎಲ್ಲಕ್ಕಿಂತಾ ಹೆಚ್ಚಾಗಿ, ಇತ್ತೀಚಿನ ದಿನಗಳಲ್ಲಿ ಸೂಳೆಗಾರಿಕೆಯಿಂದ ತಮಗೆ ಅಥವಾ ಹತ್ತಿರದ ಬಳಗದವರಿಗೆ ಸಿಗುವ ಹಣವೇ ಮುಖ್ಯ ಕಾರಣವಾಗುತ್ತಿದೆ. (ಇಲ್ಲಿ ನೀಡಿರುವ ಒತ್ತು ಲೇಖಕರದ್ದು). ತಮಗಿರುವ ಹೆಣ್ಣು ಮಕ್ಕಳಲ್ಲಿ ಸುಂದರವಾಗಿರುವ, ಗೌರವ ವರ್ಣವಿರುವ, ಹಾಗೂ ಒಳ್ಳೆಯ ಮೈಮಾಟವಿರುವ ಹುಡುಗಿಯನ್ನೇ ದೇವರಿಗೆ ಬಿಡಲು ಆಯ್ಕೆಮಾಡುತ್ತಾರೆ. ಏಕೆಂದರೆ ಅವಳ ಯೌವನದಲ್ಲಿ ಅತಿ ಹೆಚ್ಚು ಗಿರಾಕಿಗಳನ್ನು ಅವಳು ಆಕರ್ಶಿಸಬಹುದಲ್ಲ''. (ದೇವದಾಸಿ : ಕರ್ನಾಟಕದಲ್ಲಿ ಹೊತ್ತಿಉರಿಯುತ್ತಿರುವ ಸಮಸ್ಯೆ. ಪುಟ 3,4)

ಕೆಳ ಜಾತಿಗಳ ಜನ ತಮ್ಮ ಹೆಣ್ಣು ಮಕ್ಕಳನ್ನು ಯಾವ ದೇವಿಯರಿಗೆ ದಾಸಿಯರನ್ನಾಗಿ ಬಿಡುವರೋ ಆ ದೇವಾಲಯಗಳನ್ನು ಪೋಷಿಸುವವರು ಮೇಲ್ಜಾತಿಯವರಾಗಿರುವುದೂ, ಅಸ್ಪೃಶ್ಯ ಜಾತಿಗಳ ಸುಂದರ ಹಾಗೂ ಬೇಕಾದ ಹುಡುಗಿಯರು ಮಾತ್ರ ದೇವಿದಾಸಿಯರಾಗಲು ಪ್ರೋತ್ಸಾಹಿಸುವುದು, ಹಾಗೂ ಅಂತಹ ಹುಡುಗಿಯರನ್ನು ಮೇಲ್ಜಾತಿಯವರು ಆಶ್ರಯದ ಹೆಸರಿನಲ್ಲಿ ಭೋಗಿಸುವುದು ಈ ಎಲ್ಲವೂ ಬಲಾಢ್ಯ ಮೇಲ್ಜಾತಿಯವರು ಬಲಹೀನ ಕೆಳ ಜಾತಿಯವರನ್ನು ಶೋಷಿಸಲು ಬಳಸುವ ವಿಧಾನ ಎಂಬುದನ್ನು ತೋರಿಸುವುದು. ದೇವರಿಗೆ ಬಿಟ್ಟ ಹೆಣ್ಣಿಗೆ ದೈವೀಕತೆಯನ್ನು ಆರೋಪಿಸುವುದು ಮೇಲ್ಜಾತಿಯವರು ಅಸ್ಪೃಶ್ಯ ಹೆಂಗಸರು ಹಾಗೂ ಹೆಣ್ಣು ಮಕ್ಕಳೊಡನೆ ಬಹಿರಂಗ ಕಾಮಕೇಳಿಗೆ ಇಳಿದರೆ ಆಗಬಹುದಾದ ಮುಜುಗರವನ್ನು ತಪ್ಪಿಸುವ ಉಪಾಯವಾಗಿದೆ. ಬನ್ನಿ ಸಾಮಾಜಿಕ ಒಪ್ಪಿಗೆಯಡಿ ಸೂಳೆಗಾರಿಕೆ ಎಂಬ ವರದಿ ಹೀಗೆ ಹೇಳಿದೆ, ''ಈ ಪದ್ಧತಿಯನ್ನು ಮೇಲ್ಜಾತಿಯವರು ಅಸ್ಪೃಶ್ಯರ ಮೇಲೆ ಉದ್ದೇಶ ಪೂರ್ವಕವಾಗಿಯೇ ಹೇರಿರುವ ಸಾಧ್ಯತೆಗಳಿವೆ...''

ಧಾರ್ಮಿಕ ಹಾಗೂ ದೈವಿಕ ಮನ್ನಣೆ ಹೊಂದಿದ್ದ ಶೋಷಣೆಯೇ ಮುಖ್ಯವಾಗಿದ್ದ ಅನೇಕ ಸಾಮಾಜಿಕ ಅನಿಷ್ಟ ಪದ್ಧತಿಗಳು ವಿಜ್ಞಾನ ಮತ್ತು ತಂತ್ರಜ್ಞಾನದೆದುರು ಬಯಲಾಗಿವೆ. ಇತ್ತೀಚಿನ ದಿನಗಳಲ್ಲಿ ದೇವದಾಸೀ ಪದ್ಧತಿ ಸಾಕಷ್ಟು ಸಮಸ್ಯೆ ಎದುರಿಸಿದೆ. ರಾಜ್ಯ ಸರ್ಕಾರಗಳು ಹಾಗೂ ಸಾಮಾಜಿಕ ಅಭಿಪ್ರಾಯವು ಈ ಪದ್ಧತಿಯ ವಿರುದ್ಧ ಗಂಭೀರವಾದ ಕ್ರಮಗಳನ್ನು ಕೈಗೊಂಡಿದ್ದು, ಲೈಂಗಿಕ ಶೋಷಣೆ ತಡೆಗಟ್ಟಲು ಕಟ್ಟು ನಿಟ್ಟಾದ ಕ್ರಮಗಳನ್ನು ಕೈಗೊಳ್ಳಲಾಗಿದೆ. ಬಿಗಿಯಾದ ಉಸ್ತುವಾರಿಯ ದೆಸೆಯಿಂದಾಗಿ ದೇವರಿಗೆ ಬಿಡುವ ಕಾರ್ಯಕ್ರಮಗಳು ಭೂಗತವಾಗಿ ನಡೆದಿವೆ. ಇನ್ನೊಂದೆಡೆ ವೇಶ್ಯಾವಾಟಿಕೆಗಳಲ್ಲಿ ಬೇಡಿಕೆ ಹೆಚ್ಚುತ್ತಿದೆ. ಈ ಕೆಳ ಜಾತಿಯ ಹೆಣ್ಣುಗಳಿಂದ ಲೈಂಗಿಕ ಸುಖ ಪಡೆಯಲು ಯಾವುದೇ ಕಟ್ಟುಪಾಡು ಮನ್ನಣೆಗೆ ಬೆಲೆ ಕೊಡದ ಹೊರಗಿನ ಸಾಮಾನ್ಯ ಗಿರಾಕಿಗಳ ಬೇಡಿಕೆ ಹಿಂದೆಂದೂ ಕಂಡು ಕೇಳರಿಯದಷ್ಟು ಬೆಳೆದಿದೆ. ಹೊರಗಡೆಯಿಂದ ಬಂದಿರುವ ಹಾಗೂ ಸಾಮಾಜಿಕ ಕಟ್ಟುಪಾಡುಗಳಿಂದ ದೂರವಿರುವ ಇಂತಹ ಅಜ್ಞಾತ ಗಿರಾಕಿಗಳು ಯಾರಿಂದ ಬೇಕಾದರೂ ಲೈಂಗಿಕ ಸುಖವನ್ನು ಕೊಳ್ಳುವವರಾಗಿದ್ದಾರೆ.

**ಪ್ರವಾಸೋದ್ಯಮ ಮತ್ತು ಲೈಂಗಿಕ ಪ್ರವಾಸೋದ್ಯಮ ಹಾಗೂ ಮಕ್ಕಳ ಮೇಲೆ ಸೂಳೆಗಾರಿಕೆ:**

ಇತ್ತೀಚೆಗೆ, ಅಂತಾರಾಷ್ಟ್ರೀಯ ಪ್ರವಾಸೋದ್ಯಮವು ವ್ಯಾಪಾರೀ ಲೈಂಗಿಕ ಶೋಷಣೆಗೆ ಮಕ್ಕಳು ಬಲಿಯಾಗುವುದನ್ನು ಹೆಚ್ಚಿಸಿರುವ ಪ್ರಮುಖ ಹಾಗೂ ಬಲವಾಗಿರುವ ವಿಚಾರವಾಗಿದೆ. 1960 ರಿಂದ ಈಚೆಗೆ ಜಾಗತಿಕವಾಗಿ ಪ್ರವಾಸೋದ್ಯಮ ಏಳು ಪಟ್ಟು ಹೆಚ್ಚಿದೆ. ಪ್ರವಾಸೋದ್ಯಮವು ಜಗತ್ತಿನಾದ್ಯಂತ ಅತ್ಯಂತ ದೊಡ್ಡ ಪ್ರಮಾಣದಲ್ಲಿ ಉದ್ಯೋಗ ನೀಡುವ ಕ್ಷೇತ್ರವಾಗಿದ್ದು, ಶೀಘ್ರದಲ್ಲಿ ಅದೇ ಅತ್ಯಂತ ದೊಡ್ಡ ಉದ್ದಿಮೆಯಾಗಲಿದೆ. ಮಕ್ಕಳನ್ನು ಸೂಳೆಗಾರಿಕೆಗಿಳಿಸುವುದಕ್ಕೆ ಪ್ರವಾಸೋದ್ಯಮವೇ ಕಾರಣವಾಗದಿದ್ದರೂ, ಅದು ಈ ಶೋಷಣೆಗೆ ಈಡಾಗಬಹುದಾದ ಮಕ್ಕಳನ್ನು ಸರಬರಾಜು ಮಾಡುವುದಕ್ಕೆ ಕಾರಣವಾಗಿದೆ. (ಅಂತಾರಾಷ್ಟ್ರೀಯ ECPAT)

ಪ್ರವಾಸಿ ವಿದೇಶೀ ಪ್ರದೇಶಗಳಲ್ಲಿದ್ದಾಗ, ಅಲ್ಲಿಯ ಜನರಿಗೆ ಅವನು ಯಾರು ಎಂಬುದು ತಿಳಿದಿರುವುದಿಲ್ಲ. ಜೊತೆಗೆ ತನ್ನ ದೇಶದಲ್ಲೇ ಆಗಿದ್ದರೆ ಎದುರಿಸಬೇಕಾಗಿದ್ದ ಹಲವಾರು ಸಾಮಾಜಿಕ ಹಾಗೂ ಕಾನೂನಿಗೆ ಸಂಬಂಧಿಸಿದ ತೊಡರುಗಳು ಅವನಿಗಿರುವುದಿಲ್ಲ. ಜಪಾನಿನ ಗಾದೆಯೊಂದು ಹೇಳುವಂತೆ, 'ಪ್ರವಾಸಿಗನಿಗೆ ನಾಚಿಕೆ ಹೇಚಿಕೆಯೇನು ಗೊತ್ತು', ಅಥವಾ ಯೂರೋಪಿನವನೊಬ್ಬ ಹೇಳಿದಂತೆ, 'ಮನೆಯಿಂದ ದೂರ ಹೋದಂತೆ ನನ್ನ ನೈತಿಕತೆ ಕಡಿಮೆಯಾಗುವುದು'. ಹೀಗೆ, ಸಾಮಾಜಿಕವಾಗಿ ಮನ್ನಣೆ ಇರದ ಲೈಂಗಿಕ ಆಶೆಗಳು, ವಿಕೃತ ಕಲ್ಪನೆಗಳನ್ನೆಲ್ಲಾ ಪ್ರವಾಸಿಗಳು ಹೊರನಾಡಿನಲ್ಲಿ ಲೈಂಗಿಕ ಪ್ರಯೋಗಗಳ ಮೂಲಕ ಈಡೇರಿಸಿಕೊಳ್ಳಲೆತ್ನಿಸುವರು. ತಮಗಿಂತ ಕೀಳು ಎನ್ನುವವರನ್ನು ಮೇಲಿನವರು ಶೋಷಿಸುವುದರ ಮೂಲಕ ಜನಾಂಗ ತಾರತಮ್ಯವನ್ನೂ ಸಹ ಪ್ರವಾಸೋದ್ಯಮ ಗಟ್ಟಿಗೊಳಿಸುತ್ತದೆ. ಸ್ಥಳೀಯ ರೂಢಿಗತ ಅಭ್ಯಾಸಗಳು (ಮೇಲು ಕೀಳಿನ ಭಾವನೆ ಆಧಾರಿತ) ಮಕ್ಕಳೊಡನೆ ಲೈಂಗಿಕ ಸಂಬಂಧ ಹೊಂದಲು ಯಾವುದೇ ಅಭ್ಯಂತರ ವ್ಯಕ್ತಪಡಿಸುವುದಿಲ್ಲ ಎನ್ನುವ ಮೂಲಕ ಈ ಶೋಷಣೆ ಮುಂದುವರೆಯಲು ಸಹಾಯ ಮಾಡುತ್ತವೆ.

ಬಲವಂತರ ಉಚ್ಚ ತತ್ವ ಬೆಳೆಯುತ್ತಿರುವಂತೆ ಕಾಣುವುದು - ಬಿಳಿ ತೊಗಲಿನ ಜನರ ತತ್ವದ ಹೊರೆ. ತಮ್ಮ ದೇಶದಲ್ಲಿ ಸಾಮಾಜಿಕವಾಗಿ ಅನಪೇಕ್ಷಣೀಯವಾದ ಲೈಂಗಿಕ ಕಾಮನೆಗಳನ್ನು ಈಡೇರಿಸಬಲ್ಲ ಬಾಲಕ ಬಾಲಕಿಯರನ್ನು ಹುಡುಕಿಕೊಂಡು ಹಲವಾರು ಯೋರೋಪಿಯನ್ ಪ್ರವಾಸಿಗಳು ಏಷ್ಯಾ ದೇಶಗಳಿಗೆ ಬರುತ್ತಿದ್ದಾರೆ. ತಮ್ಮ ಲೈಂಗಿಕ ತೃಪ್ತಿಗಾಗಿ ಬಲಹೀನ, ಸಹಾಯ ರಹಿತ, ಏನೂ ಅರಿಯದ ಮುಗ್ಧ ಮಗುವಿನ ಮೇಲೆ ಲೈಂಗಿಕ ಪ್ರಹಾರ ಮಾಡಿದಾಗ ಮನಕ್ಷೋಬೆ ಆಗುವುದಿಲ್ಲ ಎಂಬಂತಹ ಕಂತೆ ಪುರಾಣಗಳನ್ನು ಸೃಷ್ಟಿಸಲಾಗಿದೆ. ಇದು ಪ್ರವಾಸೋದ್ಯಮದ ಮೂಲಕ ಸಾಮಾಜಿಕ ಸಂಕ್ಷೇಮ ಎನ್ನುವ ಸುಳ್ಳು ತತ್ವ - ಬಡತನದಿಂದ ನರಳುವ, ಹೊಟ್ಟೆಗಿಲ್ಲದ ಮಗು ಲೈಂಗಿಕ ಸೇವೆ ಮಾಡಿ ಆರ್ಥಿಕ ಸಹಾಯ ಪಡೆಯುವುದು ಎನ್ನುವ ಮೂಲಕ ಮಕ್ಕಳ ಶೋಷಣೆಯನ್ನು ನೆಲೆಗೊಳಿಸುವ ಯತ್ನ. ಮಕ್ಕಳು ಲೈಂಗಿಕ





ಸಂಪರ್ಕವನ್ನು ಇಷ್ಟಪಡುವುದಿಲ್ಲ ಎಂದೇನಲ್ಲ ಎಂದೂ ಹೇಳುವ ಮಟ್ಟಕ್ಕವರು ಹೋಗುತ್ತಾರೆ. ಮಕ್ಕಳನ್ನು ಸೂಳೆಗಾರಿಕೆಗಾಗಿ ಸಾಗಿಸುವುದು ಮಾರಾಟಮಾಡುವುದಿರಲಿ, ಮಕ್ಕಳ ಮೇಲೆ ಲೈಂಗಿಕ ಶೋಷಣೆಯ ವಿರುದ್ಧವೂ ಅವರ ದೇಶಗಳು ಕಠಿಣವಾದ ಕಾನೂನುಗಳನ್ನು ಜಾರಿ ತಂದಿದೆಯಲ್ಲಾ ಎನ್ನುವುದಕ್ಕೆ ಅವರಿಂದ ಯಾವ ಪ್ರತಿಕ್ರಿಯೆಯೂ ಇಲ್ಲ. ಆ ಮಕ್ಕಳಿಂದ ಬಾಲ್ಯವನ್ನು ಕಸಿಯುವ ಬದಲು ಬೇರೆಯಾವುದಾದರೂ ವಿಧಾನದಿಂದ ಆರ್ಥಿಕವಾಗಿ ಸಹಾಯ ಮಾಡಬಹುದಲ್ಲಾ ಎಂಬುದಕ್ಕೂ ಅವರಿಂದ ಯಾವುದೇ ವಿವರ ದೊರಕುವುದಿಲ್ಲ. ವಾಸ್ತವವಾಗಿ, ಅವರ ದೇಶಗಳು ಜಾರಿ ಮಾಡಿರುವ ಕಾನೂನು, ಆಯಾ ದೇಶದ ಸದಸ್ಯರು ವಿದೇಶೀ ನೆಲದಲ್ಲಿ ಮಾಡಬಹುದಾದ ಮಕ್ಕಳ ಮೇಲಿನ ಲೈಂಗಿಕ ಶೋಷಣೆಗೂ ಶಿಕ್ಷೆಯುಂಟು. ಮತ್ತೊಂದು ಕಟು ವಾಸ್ತವ, ಈ ಪ್ರವಾಸಿಗರ ಮೂಲ ದೇಶಗಳು, ಇಂತಹ ಲೈಂಗಿಕ ಪ್ರವಾಸಗಳನ್ನು ಏರ್ಪಾಡು ಮಾಡುವ ಸಂಸ್ಥೆಗಳು ಹಾಗೂ ದಲ್ಲಾಳಿಗಳ ಮೇಲೂ ಕ್ರಮ ಕೈಗೊಳ್ಳುವ ದೃಷ್ಟಿಹೊಂದಿವೆ. ಈ ಶೋಷಕರು ಬಳಸುವ 'ಸಮಾಜ ಕಲ್ಯಾಣ ತತ್ವ' ಹೀಗಾಗಿ ಒಂದು ದುರ್ಬಲ ವಾದ.

ಇಂತಹ ಪ್ರವಾಸಿಗರನ್ನು ಬರಮಾಡಿಕೊಳ್ಳುವ ಹಾಗೂ ಮಕ್ಕಳನ್ನು, ಅವರ ಮುಂದಿಡುವ ದೇಶಗಳಲ್ಲೂ ಪರಿಸ್ಥಿತಿ ಬೇರೆಯೇನಿಲ್ಲ. ಪ್ರವಾಸೋದ್ಯಮದಿಂದ ಅಭಿವೃದ್ಧಿ ಎನ್ನುವ ವಾದವನ್ನು ಪ್ರವಾಸಿಗರ ಹಾಗೂ ಇಂತಹ ಮಕ್ಕಳನ್ನಿಟ್ಟುಕೊಂಡಿರುವವರು ಹೇಳುವರು. ಪ್ರವಾಸಿಗರು ಡಾಲರುಗಳನ್ನು ತರುವರು. ಡಾಲರುಗಳಿದ್ದರೆ ಅಭಿವೃದ್ಧಿ. ಹೀಗಾಗಿ ಮಕ್ಕಳನ್ನು ಸೂಳೆಗಾರಿಕೆಗೆ ತಳ್ಳುವುದು ದೇಶ ತೆರಬೇಕಾದ ಚಿಕ್ಕ ಬೆಲೆ, ಇದನ್ನು ಕೊಟ್ಟರೇನಂತೆ ಎನ್ನುವ ವಾದದ ಮೂಲಕ ಪುಷ್ಟೀಕರಿಸಲೆತ್ನಿಸುವರು. ಪ್ರವಾಸೋಧ್ಯಮದಲ್ಲಿ ಈಗ ಬಹಳ ಜನರ ಆಸಕ್ತಿ ಇದೆ. ಗೋವಾದಂತಹ ರಾಜ್ಯಕ್ಕೆ ಪ್ರವಾಸೋದ್ಯಮ ಬಿಟ್ಟರೆ ಬೇರಾವ ಪರ್ಯಾಯ ಆರ್ಥಿಕ ಹೆಗ್ಗುರುತು ಇಲ್ಲ. ಆರ್ಥಿಕ, ರಾಜಕೀಯ, ಅಧಿಕಾರೀ ಮುಖ್ಯಸ್ಥರು, ಕಾನೂನು ಜಾರಿ ವ್ಯವಸ್ಥೆ, ಅಭಿವೃದ್ಧಿ ಆಡಳಿತ ವ್ಯವಸ್ಥೆ, ಜೊತೆಗೆ ಚಿಕ್ಕಪುಟ್ಟ ಅಂಗಡಿ ಮುಂಗಟ್ಟಿನವರು, ಎಳನೀರು ವ್ಯಾಪಾರಿಗಳು ಎಲ್ಲರೂ ಹುಲುಸಾಗಿ ಬೆಳೆದಿರುವ ಪ್ರವಾಸೋಧ್ಯಮದಲ್ಲಿ ಭದ್ರವಾಗಿ ಬೇರೂರಿದ್ದಾರೆ. ಹೀಗಾಗಿ ಅವರ ಸಮುದ್ರ ತೀರದಲ್ಲಿ ಕಾಳ್ಗಿಚ್ಚಿನಂತೆ ಹರಡುತ್ತಿರುವ (ಗಂಡು-ಹೆಣ್ಣು) ಮಕ್ಕಳ ಮೇಲೆ ಅವ್ಯಾಹತವಾಗಿ ನಡೆದಿರುವ ಲೈಂಗಿಕ ಶೋಷಣೆಯ ಸಮಸ್ಯೆಯ ಬಗ್ಗೆ ಗಮನ ಹರಿಸಲು ಅವರಿಗೆ ಸಮಯವೇ ಇಲ್ಲ. ತಮ್ಮಲ್ಲಿರುವುದು ಲೈಂಗಿಕ ಪ್ರವಾಸೋದ್ಯಮ ಎಂಬುದರ ಬಗ್ಗೆ ಅವರು ಕುರುಡಾಗಿ ವರ್ತಿಸುವುದಷ್ಟೇ ಅಲ್ಲ, ಮಕ್ಕಳ ಮೇಲೆ ನಡೆದಿರುವ ಇಂತಹ ಲೈಂಗಿಕ ದೌರ್ಜನ್ಯದ ಬಗ್ಗೆ ಯಾರಾದರೂ ಆಗಾಗ ದನಿ ಎತ್ತಿದರೆ ಅದನ್ನು ಅದುಮಲೂ ಸಿದ್ಧರಾಗಿದ್ದಾರೆ.

ಎಕ್‌ಪಾಟ್‌ನ ಭಾರತದ ವರದಿ ಹೀಗೆ ಹೇಳುತ್ತದೆ.... ''ಲೈಂಗಿಕ ವ್ಯಾಪಾರದ ಬಗ್ಗೆ ನಿಖರವಾದ ಮಾಹಿತಿ ಪಡೆಯುವುದು ತೀರಾ ಕ್ಲಿಷ್ಟಕರ. ಯಾಕೆಂದರೆ ಈ ಉದ್ದಿಮೆ ಅತ್ಯಂತ ಗುಪ್ತವಾದ ವ್ಯವಸ್ಥೆಗಳಿರುವ ಅಪರಾಧಿಗಳ ಕೈವಶದಲ್ಲಿರುವ ಬಹುಕೋಟಿ ಡಾಲರ್‌ಗಳ ವ್ಯವಹಾರ. ಈ ಸಮಸ್ಯೆಯ ಅಗಾಧತೆ ಎಷ್ಟೆಂಬುದು ನಮಗಿನ್ನೂ ಅರಿವಾಗಿಲ್ಲ ವೆಂಬುದಂತಲೂ ಸತ್ಯ. ಆದರೂ, ಇಂತಹ ವರದಿಗಳು ಈ ಸಮಸ್ಯೆಯ ವ್ಯಾಪಕತೆ ಏನೆಂದರಿಯಲು ಕೆಲವು ಸೂಚಕಗಳಾಗಬಹುದು''.

ಯೂನಿಫೆಮ್, ನವದೆಹಲಿಯ ವರದಿ, 'ಮಾನವತೆಯ ದುರವಸ್ಥೆಯಲ್ಲಿ ಮಾರಾಟ'' (Trading in Human Misery) ಹೀಗೆ ಹೇಳುತ್ತದೆ, – ದಕ್ಷಿಣ ಏಷ್ಯಾ ಭಾಗದ ವಿವಿಧ ಸೂಳೆಗೇರಿಗಳಲ್ಲಿ 16 ವರ್ಷಗಳಿಗಿಂತ ಕಡಿಮೆ ವಯಸ್ಸಿನ 10 ಲಕ್ಷಕ್ಕೂ ಅಧಿಕ ಮಕ್ಕಳು ವಾಣಿಜ್ಯ ಲೈಂಗಿಕ ವ್ಯವಹಾರದಲ್ಲಿ ಶೋಷಣೆಗೆ ಗುರಿಯಾಗುತ್ತಿದ್ದಾರೆ. ಲೈಂಗಿಕ ಜೀತಕ್ಕೆ ಬೀಳುವ ಕಾಲಕ್ಕೆ ಮಕ್ಕಳ ವಯಸ್ಸು ಕಡಿಮೆಯಾಗುತ್ತಿರುವುದೇ ಅತ್ಯಂತ ಘೋರವಾಗಿರುವುದು. ಪಾಕಿಸ್ತಾನದ ಸ್ಥಿತಿ ತಿಳಿಸುವ ವರದಿ, ಕೇವಲ ಲಾಹೋರ್ (ರೈಲ್ವೆ) ನಿಲ್ದಾಣದ ಬಳಿ 20,000 ಕ್ಕೂ ಅಧಿಕ ಮಕ್ಕಳು ಸೂಳೆಗಾರಿಕೆಯಲ್ಲಿರುವುದಾಗಿ ಹೇಳಿದೆ. ದೇಶದ ಇನ್ನಿತರ ಭಾಗಗಳ ಬಗ್ಗೆ ಮಾಹಿತಿ ಇಲ್ಲ. ಇದರಲ್ಲಿ ಗಂಡು ಮಕ್ಕಳ ಪ್ರಮಾಣ ಸಾಕಷ್ಟಿದೆ.



ಭಾರತದಲ್ಲಿ 18 ವರ್ಷದೊಳಗಿನ 5,00,000 ಹೆಣ್ಣು ಮಕ್ಕಳು ಸೂಳೆಗಾರಿಕೆಯ ಸುಳಿಗೆ ಬಿದ್ದಿದ್ದಾರೆಂದು ಇಂಡಿಯಾ ಟುಡೇ 1990ರಲ್ಲಿ ಉಲ್ಲೇಖಿಸಿತ್ತು. 'ಬೊಂಬಾಯಿ ನಗರವೊಂದರಲ್ಲೇ 10-16 ವರ್ಷದೊಳಗಿನ 40,000 ಹೆಣ್ಣು ಮಕ್ಕಳು ತಮ್ಮ ಮನೆ ಬಾಗಿಲಲ್ಲೇ ತಮ್ಮ ದೇಹ ಮಾರುವ ದಂಧೆಯಲ್ಲಿದ್ದಾರೆ' ಎಂದು ಮಹಿಳೆಯರ ರಾಷ್ಟ್ರೀಯ ಕಮಿಷನ್ ಹೇಳಿದೆ. ಲಭ್ಯವಿರುವ ಅಂಕಿ ಅಂಶದಂತೆ, ಭಾರತದಲ್ಲಿ ಸೂಳೆಗಾರಿಕೆಗೆ ಬಿದ್ದಿರುವವರಲ್ಲಿ ಶೇ.61 ಭಾಗ ಪರಿಶಿಷ್ಟ ಜಾತಿ, ವರ್ಗ ಮತ್ತು ಹಿಂದುಳಿದ ಜಾತಿಗಳಿಗೆ

ಸೇರಿದವರಾಗಿದ್ದಾರೆ. ಕಠಮಂಡುವೊಂದರಲ್ಲೇ 5000 ಮಂದಿ ಸೂಳೆಗಾರಿಕೆಯಲ್ಲಿ ಬಿದ್ದಿರುವುದಾಗಿ ಹೇಳುವ ಯೂನಿಸೆಫ್ ವರದಿ, ಅದರಲ್ಲಿ 1000 ಮಕ್ಕಳಿದ್ದಾರೆ ಎಂದಿದೆ. ನೇಪಾಳದಲ್ಲಿ ಸೂಳೆಗಾರಿಕೆ ಸಮಸ್ಯೆಯ ವಿರುದ್ಧ ಕೆಲಸ ಮಾಡುತ್ತಿರುವ ಸ್ವಯಂ ಸೇವಾ ಸಂಸ್ಥೆ ಮೈತಿ ಹೇಳುವಂತೆ ಪ್ರತಿ ವರ್ಷ ನೇಪಾಳದಿಂದ ಭಾರತಕ್ಕೆ 5,000 ರಿಂದ 7,000 ಹುಡುಗಿಯರನ್ನು ಸಾಗಿಸಲಾಗುತ್ತಿದೆ. ಮಾನವ ಹಕ್ಕುಗಳಿಗಾಗಿ ದಕ್ಷಿಣ ಏಷ್ಯಾದ ಸಂಸ್ಥೆ 1997ರ ತನ್ನ ವರದಿಯಲ್ಲಿ ಹೇಳಿರುವಂತೆ, ಭಾರತದ ಸೂಳೆಗೇರಿಗಳಲ್ಲಿ ಶೇ 50 ಭಾಗ ನೇಪಾಳಿ ಹುಡುಗಿಯರೇ ಇರುವುದು. ಇದಕ್ಕೆ ಚೈನಾ ದೇಶವೇನು ಅಪವಾದವಲ್ಲ. ನೂರಾರು ಸಾವಿರಾರು ಹುಡುಗಿಯರು, ಮುಖ್ಯವಾಗಿ ಅಲ್ಪಸಂಖ್ಯಾತ ಕೋಮುಗಳಿಗೆ ಸೇರಿದವರು ಚೈನಾದಿಂದ ಸೂಳೆಗಾರಿಕೆಗಾಗೇ ಸಾಗಿಸಲ್ಪಡುತ್ತಿದ್ದಾರೆ.

ಮಯನ್ಮಾರ್‌ನಿಂದ ಥಾಯ್‌ಲ್ಯಾಂಡಿನ ಸೂಳೆಗೇರಿಗಳಿಗೆ ಸುಮಾರು 20,000 ದಿಂದ 30,000 ಹೆಂಗಸರು ಮತ್ತು ಹುಡುಗಿಯರನ್ನು ಸಾಗಿಸಲಾಗಿದೆ ಎಂದು ಏಷ್ಯಾ ವಾಚ್ ಹೇಳಿದೆ. ಮಯನ್ಮಾರ್‌ನಿಂದ ಥಾಯ್‌ಲ್ಯಾಂಡಿಗೆ ಸುಮಾರು 9,00,000 ಅನಧಿಕೃತ ವಲಸಿಗರು ಬಂದಿದ್ದಾರೆಂದು ದಿ ರಾಯಲ್ ಥಾಯ್ ಸರ್ಕಾರ ಹೇಳಿದೆ. ಮಯನ್ಮಾರ್‌ನಿಂದ ಮಹಿಳೆಯರು ಮತ್ತು ಮಕ್ಕಳನ್ನು ಮೊದಲು ಬಾಂಗ್ಲಾದೇಶಕ್ಕೆ ನಿರಾಶ್ರಿತರನ್ನಾಗಿ ಸಾಗಿಸಿ ಅಲ್ಲಿಂದ ಮುಂದಕ್ಕೆ ಭಾರತದಲ್ಲಿ ಸೂಳೆಗಾರಿಕೆಗೆ ವರ್ಗಾಯಿಸಲಾಗುತ್ತಿದೆ. ಸುಮಾರು 2,00,000 ಸೂಳೆಗಾರಿಕೆಯಲ್ಲಿ ಬಿದ್ದ ಮಹಿಳೆಯರು ದೇಶದಲ್ಲಿದ್ದಾರೆಂದು ಮಹಿಳಾ ವಿಚಾರಗಳನ್ನು ಕುರಿತು ರಾಷ್ಟ್ರೀಯ ಕಮಿಷನ್ (NCWA) 1994ರ ವರದಿಯಲ್ಲಿ ಹೇಳಿದೆ. NCWAನ 1996ರ ವರದಿಯನ್ನು ಉಲ್ಲೇಖಿಸುವ ಯೂನಿಸೆಫ್, ಥಾಯ್‌ಲ್ಯಾಂಡಿನಲ್ಲಿ 18 ವರುಷದೊಳಗಿನ 20,000 ರಿಂದ 40,000 ಹುಡುಗಿಯರನ್ನು ಸೂಳೆಗಾರಿಕೆಯಲ್ಲಿ ತೊಡಗಿಸಲಾಗಿದೆ ಎಂದಿದೆ. ಫಿಲಿಪೈನ್ಸ್‌ಗೆ ವಿವಿಧ ದೇಶಗಳಿಂದ ಸುಮಾರು 1,00,000 ಹೆಂಗಸರನ್ನು ಸೂಳೆಗಾರಿಕೆಗಾಗಿಯೇ ಸಾಗಿಸಲಾಗಿದೆಯೆಂದು CATW ತನ್ನ 1996ರ ವರದಿಯಲ್ಲಿ ಉಲ್ಲೇಖಿಸಿದೆ.

ನಾವಂದುಕೊಳ್ಳುವುದು ನೈತಿಕ ಮತ್ತು ರಾಜಕೀಯ ಕಾರಣಗಳೇ ಇದಕ್ಕೆ ಮೂಲವೆಂದು. ಆದರದು ಅಧಿಕಾರದ ಸಂಬಂಧ, ವಾಣಿಜ್ಯ ಬೆಳೆಗಳಿಂದ ಬಂದ ಅತ್ಯಧಿಕ ಲಾಭ ಮತ್ತು ಪ್ರಮುಖವಾಗಿ ಕೃಷಿಯನ್ನೇ ಅವಲಂಬಿಸಿರುವ ದೇಶಗಳಲ್ಲಿ ಧ್ರುವೀಕರಿಸಿರುವ ಕಡಿಮೆ ವರಮಾನ ಹಾಗೂ ಬಡತನ, ಸದಾ ಕಾಡುವ ಹಿಂದಿನ ಪಾಳೆಗಾರಿಕೆಯ ಅಧಿಕಾರಶಾಹಿ, ದುರ್ಬಲವಾದ ಕೈಗಾರಿಕಾ ವ್ಯವಸ್ಥೆಯೇ ಮೊದಲಾದವುಗಳಿಂದ ದೇವಸ್ಥಾನ ಸೂಳೆಗಾರಿಕೆಯಂತಹ ದೇವದಾಸಿ ಪದ್ಧತಿಗೆ ಸಾಮಾಜಿಕ ಅನಿಷ್ಟ ಮನ್ನಣೆ ದೊರಕುವಂತಾಗಿದೆ. ಅಧಿಕಾರ ಅಂತಸ್ತುಗಳ ತೀವ್ರ ಅಸಮತೋಲನದ ಅಂತಿಮ ಸ್ವರೂಪ ಕೆಳಜಾತಿಯ, ಕೃಷಿಕ ಕುಟುಂಬಗಳ ಹೆಣ್ಣುಮಕ್ಕಳು ಮೈನೆರೆಯುತ್ತಿದ್ದಂತೆಯೇ ಅವರನ್ನು ಸೂಳೆಗಾರಿಕೆಗೆ ಬರಲೇಬೇಕೆಂಬ ಒತ್ತಾಯ ಬರುತ್ತದೆ. ಸಂಪ್ರದಾಯ, ಪುರಾಣಗಳನ್ನು ಪುರೋಹಿತ ಶಾಹಿ ಸೃಷ್ಟಿಸಿ ಅಧಿಕಾರಸ್ಥ ಕೃಷಿಕ ಜಾತಿಗಳು ನಡೆಸುವ ಶೋಷಣೆಯನ್ನು ಭದ್ರಗೊಳಿಸಿದೆ. ಕೈಗಾರಿಕಾ ಸಮಾಜದಲ್ಲೂ ಇಂತಹದೇ ಪರಿಸ್ಥಿತಿ ಸಂಭವಿಸಿದೆ.

### ತಮ್ಮ ಲೈಂಗಿಕ ತೃಷೆ ತೀರಿಸಿಕೊಳ್ಳಲು ಜನರೇಕೆ ಮಕ್ಕಳನ್ನು ಬಳಸಿಕೊಳ್ಳುತ್ತಾರೆ?

ಕೆಲವು ಜನ ತಮ್ಮ ಲೈಂಗಿಕ ತೃಷೆ ತೀರಿಸಿಕೊಳ್ಳಲು ಮಕ್ಕಳನ್ನೇ ಆಯ್ದುಕೊಳ್ಳಲು ಹಲವಾರು ಕಾರಣಗಳಿವೆ. ಮೊತ್ತ ಮೊದಲನೆಯದಾಗಿ, ಕನ್ಯೆಯೊಂದಿಗೆ ಸಂಭೋಗ ಲೈಂಗಿಕ ರೋಗಗಳನ್ನು ದೂರಮಾಡುವುದೆಂಬ ಸುಳ್ಳು ನಂಬಿಕೆ. ಇದರೊಂದಿಗಿರುವ ಇನ್ನೊಂದು ಗಟ್ಟಿ ಸುಳ್ಳು ನಂಬಿಕೆ ಮಕ್ಕಳೊಂದಿಗೆ ಸಂಭೋಗ ಗಂಡಸ್ತನ ಹಾಗೂ ಲೈಂಗಿಕ ಶಕ್ತಿ ಹೆಚ್ಚಿಸುವುದು ಎಂಬುದು. ಏಡ್ಸ್ ಬರುವುದೆಂಬ ಭಯವೂ ಸಹ ಮಕ್ಕಳನ್ನೇ ಲೈಂಗಿಕ ವಸ್ತುಗಳಾಗಿ ಬಳಸಲು ಕಾರಣವಾಗಿದೆ. ಇಲ್ಲಿರುವ ನಂಬಿಕೆ ಮಕ್ಕಳಿಗೆ ಎಚ್.ಐ.ವಿ. ಸೋಂಕಿರುವುದಿಲ್ಲ ಹಾಗೂ ಅವರಿಂದ ಆ ಭಯಾನಕ ರೋಗ ತಮಗೆ ಬರುವುದಿಲ್ಲ ಎಂಬುದಾಗಿದೆ. ಲೈಂಗಿಕ ದುಃಶ್ಕಲ್ಪನೆಗಳು, ವಕ್ರಬುದ್ಧಿಯಲ್ಲದೆ, ಮಕ್ಕಳು ದೊಡ್ಡವರ ನಡುವಿನ ದೊಡ್ಡಸ್ತಿಕೆ ಮತ್ತು ಅವಲಂಬನೆ ಸಂಬಂಧವೂ ಬಹು ಮುಖ್ಯವಾದ ಕಾರಣ. ಮಕ್ಕಳ ಬಲಹೀನತೆ ಪರಾವಲಂಬನೆ, ಮುಗ್ಧತೆ ಮತ್ತು ಯಾವುದೇ ಸಹಾಯವಿಲ್ಲದ ಅವರ ಪರಿಸ್ಥಿತಿಯನ್ನು, ಗಿರಾಕಿಗಳು ಮಕ್ಕಳ ಮೇಲೆ ಲೈಂಗಿಕ ಶೋಷಣೆ ಮಾಡಲು ದುರುಪಯೋಗಿಸುವರು. ಮಕ್ಕಳನ್ನು ಸೂಳೆಗಾರಿಕೆಗಿಳಿಸಲು ಅತ್ಯಂತ ಸುಲಲಿತವಾದ (ಆದರೆ ಕಾನೂನು ಬಾಹಿರವಾದ) ಮತ್ತು ಅಡೆತಡೆಯೇ ಇಲ್ಲದ ದಾರಿಯೆಂದರೆ ಎರಡನೆ ತಲೆಮಾರಿನ ಸೂಳೆಗಾರಿಕೆ, ಅಂದರೆ, ಸೂಳೆಗಾರಿಕೆಗಿಳಿದವರ ಮಕ್ಕಳನ್ನು ಲೈಂಗಿಕ ಜೀತಕ್ಕೆಳೆಯುವುದು. ಸಾಮಾನ್ಯವಾಗಿ ಎಲ್ಲರೂ ಕೇಳುವ ಪ್ರಶ್ನೆ, 'ಸೂಳೆಗಾರಿಕೆಗೆ ಬಿದ್ದವರೇಕೆ ಮಕ್ಕಳನ್ನು ಹೊಂದಲಿಚ್ಚಿಸುವರು?' ಈ ಪ್ರಶ್ನೆ ತೀರಾ ಜವಾಬ್ದಾರಿ ರಹಿತವಾದದ್ದು. ಒಂದು ಹೆಣ್ಣಾಗಿ ಆಕೆಗೆ ಸ್ವಾಭಾವಿಕ ಆಸೆಗಳಿರುತ್ತವೆ, ಹಾಗೆಯೇ ಮಕ್ಕಳನ್ನು ಹೊಂದುವುದು ಆಕೆಗೆ ಸ್ವಾಭಾವಿಕ ಮತ್ತು ಧನಾತ್ಮಕ ಹಕ್ಕು. ತೀವ್ರವಾದ ಸಾಮಾಜಿಕ ತಿರಸ್ಕಾರ, ಹೀಗಳಿಕೆ ಮತ್ತು ಕಷ್ಟ ಹಾಗೂ ಮೂಲೆಗುಂಪಾದ ಬದುಕಿನ ಹೆಂಗಸರಿಗೆ ಅವರ ಮಗುವೊಂದೇ ಪರ್ಯಾಯ ಭವಿಷ್ಯಕ್ಕೆ ಒಂದು ಆಶ್ರಯ. ಅಂತಹವರು ತೀವ್ರವಾಗಿ ಶೋಷಣೆಗೊಳಲ್ಪಟ್ಟದ್ದರಿಂದ, ಯಾರದೋ ದುರಾಶೆಗೆ ಬಲಿಯಾದುದ್ದರಿಂದ ಮತ್ತು ಸಮಾಜ ಅವರಿಗೆ ಯಾವುದೇ ಸಹಾಯ ಸೌಲಭ್ಯ ಸಿಗದಿರುವುದರಿಂದ ಅವರಿಗೆ ತಮ್ಮ ಮಗುವೊಂದೇ ಎಲ್ಲರೀತಿಯ ಮಾನವ ಸಂಬಂಧಗಳು ಮತ್ತು ಬದುಕಲು ಇರುವ ಸ್ಫೂರ್ತಿ. ದುರಾದೃಷ್ಟವಶಾತ್, ಇಂತಹವರು ತಮ್ಮ ಮಕ್ಕಳನ್ನು ತಮ್ಮ ಬಳಿಯೇ ಇಟ್ಟುಕೊಳ್ಳುವ ಹಕ್ಕನ್ನೂ ಕಸಿದುಕೊಡಿರುವ ಮಕ್ಕಳಿಗೆ ನ್ಯಾಯ ಕಾನೂನು (J.J. Act), ಅವರ ಬದುಕಿನ ಆಶಯವನ್ನೇ ಅಲುಗಾಡಿಸಿ ಅವರನ್ನು ತೀರಾ ಅಮಾನವೀಯ ಸ್ಥಿತಿಗೆ ತಳ್ಳಿದೆ.

ಕೆಂಪುದೀಪದ ಪ್ರದೇಶ ಅಥವಾ ಸೂಳೆಗೇರಿ ಮಕ್ಕಳ ಉತ್ತಮ ಬೆಳವಣಿಗೆಗೆ ಸೂಕ್ತವಾದ ಸ್ಥಳವಲ್ಲ ಎಂಬುದರ ಬಗ್ಗೆ ಯಾವುದೇ ಅನುಮಾನವಿಲ್ಲ. ಅಂತಹ ಕೆಟ್ಟ ವಾತಾವರಣದಿಂದ ಮಕ್ಕಳನ್ನು ಹೊರತರಲು ಎಲ್ಲ ಪ್ರಯತ್ನಗಳನ್ನು ಮಾಡಬೇಕು. ಆದರೆ ತಾಯಿ ಮಗುವಿನ ಸಂಬಂಧವನ್ನು ಕಡಿದು ಹಾಕದಂತೆ ನೋಡಿಕೊಳ್ಳಬೇಕು.

**ಕಾನೂನುಗಳು ಮತ್ತು ಒಡಂಬಡಿಕೆಗಳು**

ಭಾರತದ ಸಂವಿಧಾನದ 23ನೇ ಪರಿಚ್ಛೇದ ಹೀಗೆ ಹೇಳಿದೆ, ''ಮನುಷ್ಯರ ಮತ್ತು ಭಿಕ್ಷುಕರ ಮಾರಾಟ, ಸಾಗಣೆ ಮತ್ತು ಎಲ್ಲ ರೀತಿಯ ಬಲವಂತದ ದುಡಿಮೆಯನ್ನು ನಿಷೇಧಿಸಲಾಗಿದೆ, ಮತ್ತು ಈ ನಿಯಮವನ್ನು ಯಾರೇ ಉಲ್ಲಂಘಿಸಿದರೂ ಅವರಿಗೆ ಕಾನೂನು ರೀತ್ಯ ಶಿಕ್ಷಿಸಲಾಗುತ್ತದೆ''. ಇದರೊಂದಿಗೆ, ಭಾರತೀಯ ದಂಡ ಸಂಹಿತೆ(IPC) 1860 ರಲ್ಲಿ ಜನರ ಅಕ್ರಮ ಸಾಗಣೆ ಮತ್ತು ಬಲವಂತದ ದುಡಿಮೆ ವಿರುದ್ಧ 12 ವಿವಿಧ ವಿಚಾರಗಳಿವೆ. ಅಪಹರಣ, ತಡೆಹಿಡಿಯುವುದು, ಕಾನೂನು ಬಾಹಿರ ಸಂಭೋಗ, ಬಲವಂತದ ಸೂಳೆಗಾರಿಕೆ, ಪ್ರಾಣಾಂತಿಕ ಪೆಟ್ಟು, ಜೀತ, ಮನುಷ್ಯರ ಮತ್ತು ಪುಟ್ಟ ಮಕ್ಕಳ ಮಾರಾಟ ಮತ್ತು ಖರೀದಿ, ಅತ್ಯಾಚಾರ ಮತ್ತು ಅಶ್ಲೀಲವಾಗಿ ತೋರುವುದು ಇವುಗಳನ್ನು ಈ ಕಾನೂನಿನಡಿ ತರಲಾಗಿದೆ.

ಹಾಳುಗೆಡುವುತ್ತದೆ''. ಈ ಒಡಂಬಡಿಕೆಗೆ ಸಹಿ ಹಾಕಿದ ರಾಷ್ಟ್ರಗಳೆಲ್ಲವೂ, ಸೂಳೆಗಾರಿಕೆಯನ್ನು ನಿಯಂತ್ರಿಸಲೆಂದೇ ಮಾಡಿದ್ದ ಎಲ್ಲರೀತಿಯ ವಿಶೇಷ ದಾಖಲೆ ಕಾನೂನು ಅಥವಾ ಉಸ್ತುವಾರಿ ನಿಯಮಗಳನ್ನು ತೆಗೆದುಹಾಕಲು ಒಪ್ಪಿದವು. ಈ ಒಡಂಬಡಿಕೆಗೆ ಸಹಿ ಹಾಕಿದ ರಾಷ್ಟ್ರಗಳು ಸೂಳೆಗಾರಿಕೆಯನ್ನು ತಡೆಯುವುದೇ ಅಲ್ಲದೆ, ಅಂತಹವರ ಪುನರ್ವಸತಿ ಹಾಗೂ ಸೂಳೆಗಾರಿಕೆಗೆ ಈಡಾದವರು ಸಮಾಜದಲ್ಲಿ ಮತ್ತೆ ಸೇರಲು ನೆರವಾಗುವ ಸಾರ್ವಜನಿಕ, ಖಾಸಗಿ, ಶೈಕ್ಷಣಿಕ, ಆರೋಗ್ಯ, ಸಾಮಾಜಿಕ, ಆರ್ಥಿಕ ಹಾಗೂ ಇತರ ಸೇವೆಗಳನ್ನು ನೀಡಬೇಕು (ಪರಿಚ್ಛೇದ 16) ಮತ್ತು ಕೆಲಸವನ್ನರಸಿ ಬರುವ ಮಕ್ಕಳು ಮಹಿಳೆಯ್ರನ್ನು ಸೂಳೆಗಾರಿಕೆಯಂತಹ ವ್ಯವಸ್ಥೆಗೆ ದೂಡದಂತೆ ನೋಡಿಕೊಳ್ಳಲು ಕೆಲಸ ನೀಡುವ ಸಂಸ್ಥೆಗಳ ಮೇಲೆ ನಿಗಾ ಮಹಿಸಬೇಕು (ಪರಿಚ್ಛೇದ 20) ಎಂದು ಹೇಳಲಾಗಿದೆ.



1904ರಲ್ಲಿ ಜಾರಿ ಮಾಡಲಾದ ಬಿಳಿಯರಿಗಾಗಿ ಜೀತದಾಳುಗಳ ಸಾಗಣೆ ತಡೆ ಒಪ್ಪಂದ ಈ ದೃಷ್ಟಿಯ ಮೊದಲ ಅಂತಾರಾಷ್ಟ್ರೀಯ ವಿಧಿಬದ್ಧವಾದ ದಸ್ತಾವೇಜು. ಇದರ ನಂತರ ಬಂದದ್ದು 1910ರಲ್ಲಿ ಬಿಳಿಯರಿಗಾಗಿ ಜೀತದಾಳುಗಳ ಸಾಗಣೆ ತಡೆ ಕುರಿತು ನಡೆದ ಅಂತಾರಾಷ್ಟ್ರೀಯ ಒಡಂಬಡಿಕೆ. ಆ ನಂತರ, 1921ರಲ್ಲಿ ಜಾರಿಯಾದುದು ಮಹಿಳೆಯರು ಮತ್ತು ಮಕ್ಕಳ ಕಾನೂನು ಬಾಹಿರ ಸಾಗಣೆ ವಿರುದ್ಧದ ಅಂತಾರಾಷ್ಟ್ರೀಯ ಒಡಂಬಡಿಕೆ. 1933ರಲ್ಲಿ ಜಾರಿಯಾದ ಪ್ರೌಢಾವಸ್ಥೆಗೆ ಬಂದ ಮಹಿಳೆಯ ಕಾನೂನು ಬಾಹಿರ ಸಾಗಣೆ ಪ್ರತಿಬಂಧಿಸುವ ಅಂತಾರಾಷ್ಟ್ರೀಯ ಒಡಂಬಡಿಕೆ, ಭಾರತದಲ್ಲಿ ಜಾರಿಯಾದ ಕಾನೂನು ಬಾಹಿರ ಸಾಗಣೆ ವಿರುದ್ಧದ ಕಾನೂನಿಗೆ ದಾರಿಯಾಯಿತು. 1949ರಲ್ಲಿ ಮುಂದಿಡಲಾಗಿದ್ದ ಜನರ ಕಾನೂನು ಬಾಹಿರ ಸಾಗಣೆ ಮತ್ತು ಸೂಳೆಗಾರಿಕೆಯ ಮೂಲಕ ಶೋಷಣೆ ಪ್ರತಿಬಂಧನೆ' ಎಂಬ ವಿಶ್ವ ಸಂಸ್ಥೆಯ ಒಡಂಬಡಿಕೆಯನ್ನು ಭಾರತವೂ ಒಪ್ಪಿ ಸಹಿಹಾಕಿದೆ. ಅದರಲ್ಲಿ ಹೀಗೆ ಹೇಳಲಾಗಿದೆ, ''ಸೂಳೆಗಾರಿಕೆ ಮತ್ತು ಅದರೊಡನಿರುವ ಸೂಳೆಗಾರಿಕೆಗಾಗಿ ಜನರ ಕಾನೂನುಬಾಹಿರ ಸಾಗಣೆ, ಮನುಷ್ಯರ ಗೌರವಯುತ ಬದುಕಿನ ಬುಡವನ್ನೇ ಪ್ರಶ್ನಿಸುವುದಲ್ಲದೆ, ವ್ಯಕ್ತಿ, ಕುಟುಂಬ ಮತ್ತು ಒಟ್ಟು ಸಮುದಾಯದ ನೆಮ್ಮದಿಯನ್ನೇ

ಭಾರತ 1956ರಲ್ಲಿ ಜಾರಿ ಮಾಡಿದ SITA ಅನೈತಿಕ ಸಾಗಣೆ ಪ್ರತಿಬಂಧನ ಕಾನೂನು ವೇಶ್ಯಾವಾಟಿಕೆಯನ್ನು ಹೇಗೆ ವಿವರಿಸಿದೆ ಎಂಬುದನ್ನು ಗಮನಿಸುವುದು ಬಹು ಮುಖ್ಯ. ''ಸಂಬಂಧವಿಲ್ಲದವರಿಗೆ ಲೈಂಗಿಕ ಸಂಭೋಗಕ್ಕಾಗಿ ತನ್ನ ದೇಹವನ್ನು ಯಾವ ಹೆಣ್ಣು ಬಾಡಿಗೆಗೆ ನೀಡಲು ಮುಂದೆ ಬರುವಳೋ, ಇದಕ್ಕಾಗಿ ಹಣ ಅಥವಾ ವಸ್ತುವನ್ನು ತಕ್ಷಣ ಅಥವಾ ಬೇರೆ ರೀತಿಯಲ್ಲಿ ಪಡೆಯುವಳೋ ಅಂತಹವರಿಗೆ ವೇಶ್ಯೆ ಎಂಬುದರೊಡನೆ ಸಂಬಂಧ ಕಲ್ಪಿಸಲಾಗುತ್ತದೆ'' ವಿಭಾಗ-2(ಎಫ್) ಇದು ಗಂಡಸರನ್ನು ತನ್ನ ಪರಿಧಿಯಿಂದ ಹೊರಗಿಟ್ಟಿರುವುದಷ್ಟೇ ಅಲ್ಲ, ಗಿರಾಕಿಗಳನ್ನು ಶಿಕ್ಷಿಸಲು ಯಾವುದೇ ಅವಕಾಶ ನೀಡಿಲ್ಲ.

ವೇಶ್ಯಾವಾಟಿಕೆ ನಡೆಸುವುದು, ತಲೆಹಿಡುಕತನ, ಗಿರಾಕಿಗಳನ್ನು ಆಕರ್ಶಿಸುವುದು/ಕರೆಯುವುದು ಮತ್ತಿತರ ಸಂಬಂಧಿತ ಕೆಲಸಗಳನ್ನು ಅಪರಾಧ ಎಂದು ಗುರುತಿಸುವ SITA, ಅಂತಹವರನ್ನು ಬಂಧಿಸಿದರೆ, ಅವರನ್ನು ಒಳ್ಳೆಯ ಸ್ವಭಾವಕ್ಕೆ ಪ್ರೊಬೇಷನ್ ಮೇಲೆ ಅಥವಾ ಶಿಕ್ಷೆ ಪಡೆದ ಮೇಲೆ ಬಿಡುಗಡೆ ಮಾಡಲು ಅವಕಾಶ ನೀಡುವುದು. ಕೇವಲ ವೇಶ್ಯಾವೃತ್ತಿ ಎಂಬುದು ಅಪರಾಧವಲ್ಲದಿದ್ದರೂ, ಗಿರಾಕಿಗಳನ್ನು ಕರೆಯುವುದು ಅಥವಾ

ಆಕರ್ಷಿಸುವುದು ಮತ್ತು ಸಾರ್ವಜನಿಕ ಪ್ರದೇಶಗಳಲ್ಲಿ ವೇಶ್ಯಾವಾಟಿಕೆ ನಡೆಸುವುದು ಅಪರಾಧವಾಗಿದೆ. ಹೀಗಾಗಿ 1949ರ ಒಡಂಬಡಿಕೆಯಿಂದ ತೀರಾ ಮುಂದೆ ಹೋಗಿ ಕೆಲವು ಪ್ರದೇಶ/ವಿಭಾಗಗಳಲ್ಲಿ ವೇಶ್ಯಾವಾಟಿಕೆ ಮಾಡುವವರನ್ನು SITA ಶಿಕ್ಷಿಸಿದೆ. ಹೀಗಾಗಿ, ಭಾರತದ ನಿಲುವು ಪ್ರತಿಬಂಧನಾತ್ಮಕವಲ್ಲದಿದ್ದರೂ, SITA ಖಂಡಿತವಾಗಿಯೂ ಸೂಳೆಗಾರಿಕೆಗೆ ಬಲಿಯಾದವರ ಪರವಾಗಿಲ್ಲ. ಒಡಂಬಡಿಕೆಯಲ್ಲಿ ಹೇಳಿರುವಂತಹ ಯಾವುದೇ ರೀತಿಯ ಹೆಣ್ಣುಮಕ್ಕಳು ಸೂಳೆಗಾರಿಕೆಗೆ ಬೀಳುವುದನ್ನು ತಡೆಯುವುದು, ಮತ್ತು ಪುನರ್ವಸತಿ ಬಗ್ಗೆ ವಿಶೇಷವಾಗಿ SITA ಏನೂ ಹೇಳುವುದಿಲ್ಲ. 'ರಕ್ಷಣೆ' ಮತ್ತು 'ತಪ್ಪು ಸರಿಪಡಿಸುವ' ಸಂಸ್ಥೆಗಳನ್ನು ಸ್ಥಾಪಿಸಲಾಗಿದ್ದರೂ, ಪುನರ್ವಸತಿ ನೀತಿ ಎಂಬುದನ್ನು ಮಾತ್ರಾ ಪ್ರಕಟಮಾಡಲೇ ಇಲ್ಲ. SITAವನ್ನು 1986ರಲ್ಲಿ ತಿದ್ದುಪಡಿಮಾಡಿ (ITPPA) ಗಂಡು ಮಕ್ಕಳ ಅನಧಿಕೃತ ಸಾಗಣೆಯನ್ನು ಇದರಡಿ ತಂದು, ಶಿಕ್ಷೆಯನ್ನು ಇನ್ನೂ ತೀವ್ರಗೊಳಿಸಿ ಆ ಮೂಲಕ ಅಕ್ರಮ ಸಾಗಣೆ ವಿರುದ್ಧ ಕಾನೂನನ್ನು ಇನ್ನೂ ಗಟ್ಟಿಗೊಳಿಸಲಾಯಿತು. ಕೆಲವು ವ್ಯಾಖ್ಯಾನಗಳು ಹಾಗೂ ಶಿಕ್ಷೆಗಳಲ್ಲಿ ಬದಲಾವಣೆಗಳು ಬಂದರೂ, ಸೂಳೆಗಾರಿಕೆಗೆ ಬಿದ್ದವರಿಗೆ ನೀಡುವ ಶಿಕ್ಷೆ ಹಾಗೂ ಪುನರ್ವಸತಿ ಕಾರ್ಯಕ್ರಮಗಳು ಇಲ್ಲದೆ ಈ ಕಾನೂನು ಈಗಲೂ ಪರಿಣಾಮಕಾರಿಯೇನಲ್ಲ, ಸೂಳೆಗಾರಿಕೆಗೆ ಇರುವ ಮೂಲ ವಿಚಾರಗಳನ್ನು ಗಮನಕ್ಕೆ ತೆಗೆದುಕೊಳ್ಳಲು ಇದು ಸೋಲುವುದಷ್ಟೇ ಅಲ್ಲ, ಸೂಳೆಗಾರಿಕೆಯಲ್ಲಿರುವ ಶೋಷಣಾ ಅಂಶಗಳನ್ನು ತೆಗೆದು ಹಾಕಲೂ ಸಹ ಇದರಿಂದಾಗದು.

ಮಹಾರಾಷ್ಟ್ರ ಸರ್ಕಾರವು ITPPA 1986ರ ಅನ್ವಯ ಮಾಡಬೇಕಾದ ನಿಯಮಗಳನ್ನು ಈಗಲೂ ಸಹ ಮಾಡಿಲ್ಲ.

ರಕ್ಷಣಾ ಕೇಂದ್ರಗಳನ್ನು ಹೇಗೆ ನಡೆಸಬೇಕು, ನಿರ್ವಹಿಸಬೇಕು ಮತ್ತು ತಪ್ಪು ಸರಿಪಡಿಸಿಕೊಳ್ಳಲು ನೆರವಾಗಲು ಎಂತಹ ವ್ಯವಸ್ಥೆಗಳನ್ನು ಮಾಡಬೇಕು ಎಂಬುದರ ಬಗ್ಗೆ ನಿರ್ದಿಷ್ಟ ನಿರ್ದೇಶನಗಳಿಲ್ಲ. ಸೂಳೆಗಾರಿಕೆಗೀಡಾದ ಮಹಿಳೆಯರ ಪುನರ್ವಸತಿಗೆ ಎಂತಹ ಸೇವೆಗಳನ್ನು ಅವು ನೀಡಬೇಕು ಎಂಬುದರ ಬಗ್ಗೆಯೂ ಯಾವುದೇ ಯೋಜನೆಗಳಿಲ್ಲ. ಈ ಮಹಿಳೆಯರನ್ನು ಈಗಲೂ ಅಪರಾಧಿಗಳು ಎಂದೇ ಪರಿಗಣಿಸಲಾಗುತ್ತದೆ ಮತ್ತು ಅವರ ಮೇಲಿನ ಆಪಾದನೆ ಸಾರ್ವಜನಿಕ ನೈತಿಕತೆಯ ವಿರುದ್ಧ ಎಂದೇ ಗುರುತಿಸಲಾಗುತ್ತಿದೆ. ಈ ಕಾನೂನಿನ ಜಾರಿಗಾಗಿ ಯಾವುದೇ ವಿಶೇಷ ನ್ಯಾಯಾಲಯಗಳನ್ನು ನೇಮಿಸಲಾಗಿಲ್ಲ ಮತ್ತು ಕೋರ್ಟ್ ಆಗಲಿ, ಪೋಲೀಸರಾಗಲಿ, ಎಲ್ಲೋ ಒಂದೆರಡು ಪ್ರಕರಣಗಳನ್ನು ಬಿಟ್ಟು ಮಿಕ್ಕೆಲ್ಲೂ ಸಮಾಜ ಕಾರ್ಯಕರ್ತರ ನೆರವನ್ನು ಏರ್ಪಡಿಸಿಲ್ಲ.

ಸಾರ್ವಜನಿಕರು ಮತ್ತು ಮಹಾರಾಷ್ಟ್ರ ಸರ್ಕಾರ ನಡುವಿನ ಪ್ರಕರಣದಲ್ಲಿ (ನ್ಯಾಯಾಲಯ ತಾನೇ ತೆಗೆದುಕೊಂಡ ಪ್ರಕರಣ ಸಂಖ್ಯೆ 112, 1996) ಬೊಂಬಾಯಿ ಉಚ್ಚ ನ್ಯಾಯಾಲಯವು, ಬೊಂಬಾಯಿಯ ಸೂಳೆಗೇರಿಗಳಲ್ಲಿ ಸಿಲುಕಿರುವ ಅಪ್ರಾಪ್ತವಯಸ್ಕ ಮಕ್ಕಳನ್ನು ಬಿಡಿಸಲು ಪೋಲೀಸರಿಗೆ ನಿರ್ದೇಶಿಸಿತು. ಅದರಂತೆ 473 ಅಪ್ರಾಪ್ತ ವಯಸ್ಕ ಮಕ್ಕಳನ್ನು ಬಿಡಿಸಲಾಯಿತು. ಈ ಮಕ್ಕಳಿದ್ದ ಸೂಳೆಗೇರಿಗಳನ್ನು ನಡೆಸುತ್ತಿದ್ದವರ ಮೇಲೆ ಈ ಕಾನೂನಿನಡಿ ಪ್ರಕರಣ ದಾಖಲು ಮಾಡಿಕೊಳ್ಳಬೇಕು ಹಾಗೂ ಮಕ್ಕಳ ಪುನರ್ವಸತಿ ಕೈಗೊಳ್ಳಬೇಕೆಂದೂ ನ್ಯಾಯಾಲಯ ನಿರ್ದೇಶಿಸಿತು. ಈ ಮಕ್ಕಳನ್ನು HIV ಪರೀಕ್ಷೆಗೆ ಗುರಿಪಡಿಸಲಾಯಿತು. ಈ ಸಂದರ್ಭದಲ್ಲಿ ಸ್ವಯಂ ಸೇವಾ ಸಂಘಗಳು ಮಧ್ಯ ಪ್ರವೇಶದಿಂದಾಗಿ, ಈ ಮಕ್ಕಳನ್ನು ಅವರು ಇಚ್ಚೆ ಪಟ್ಟರೆ ಮಾತ್ರಾ ಈ ಪರೀಕ್ಷೆಗೆ ಒಳಪಡಿಸಬೇಕೆಂದೂ, ಅಕಸ್ಮಾತ್ ಈಗಾಗಲೇ ಪರೀಕ್ಷೆ ಆಗಿದ್ದಲ್ಲಿ ಆ ಮಕ್ಕಳ ಗುರುತನ್ನು ಬಹಿರಂಗ ಪಡಿಸಬಾರದೆಂದು ನ್ಯಾಯಾಲಯವು ತೀರ್ಪಿತ್ತಿತು. ಮುಂದುವರಿದ ನ್ಯಾಯಾಲಯದ ನಿರ್ದೇಶನಗಳು ಆ ಮಕ್ಕಳನ್ನು ಅವರವರ ರಾಜ್ಯಕ್ಕೆ ಪುನರ್ವಸತಿಗಾಗಿ ಕಳುಹಿಸಬೇಕೆಂದೂ ಹೇಳಿತು. ಆಯಾ ಸರ್ಕಾರಗಳು ಈ ಮಕ್ಕಳಿಗಾಗಿ ಸೂಕ್ತ ಪುನರ್ವಸತಿ ಯೋಜನೆ ಮಾಡಬೇಕು ಹಾಗೂ ಕುಟುಂಬವಿಲ್ಲದ ಮಕ್ಕಳಿಗೂ ಸಹ ಸಮಾಜದಲ್ಲಿ ಬೆರೆಯಲು ಸೂಕ್ತ ವ್ಯವಸ್ಥೆ ಮಾಡಬೇಕೆಂದೂ ಈ ತೀರ್ಪು ಹೇಳಿದೆ. ಭಾರತದ ಸರ್ವೋಚ್ಚ ನ್ಯಾನಾಲಯವು ವಿಶಾಲ್ ಜೀತ್ ಮತ್ತು ಭಾರತ ಸರ್ಕಾರ (AIR 1990 SC 1412) ಪ್ರಕರಣದಲ್ಲಿ ನೀಡಿದ ತೀರ್ಪಿನಲ್ಲಿ ಸೂಳೆಗಾರಿಕೆಗೆ ಮಕ್ಕಳು ಬೀಳುವುದನ್ನೂ ತಪ್ಪಿಸಲು ಒಂದು ಸಲಹಾ ಸಮಿತಿ ರಚಿಸಬೇಕು, ಮಕ್ಕಳ ರಕ್ಷಣೆ, ಆರೈಕೆ, ಚಿಕಿತ್ಸೆಗೆ ಕಾರ್ಯಕ್ರಮಗಳನ್ನು ತೆಗೆದುಕೊಳ್ಳಬೇಕು, ಹಾಗೂ ಮಕ್ಕಳ ಮೇಲೆ ಲೈಂಗಿಕ ದೌರ್ಜನ್ಯ ತಡೆಯಲು ಈಗಿರುವ ಕಾನೂನುಗಳಲ್ಲಿ ಸೂಕ್ತ ತಿದ್ದುಪಡಿಗಳನ್ನು ಮಾಡಬೇಕೆಂದು ನೀಡಿರುವ ಸಲಹೆಗಳನ್ನು, ಮುಂಬಯಿಯ ಉಚ್ಚ ನ್ಯಾಯಾಲಯವು ಮತ್ತೆ ಉಲ್ಲೇಖಿಸಿತು. ತನ್ನ ತೀರ್ಪು ಹೊರಬಿದ್ದ ನಾಲ್ಕು ಕೆಲಸದ ದಿನದೊಳಗೆ ರಾಜ್ಯ ಸರ್ಕಾರವು ಸಲಹಾ ಸಮಿತಿಯನ್ನು ರಚಿಸಬೇಕೆಂದೂ ನಿರ್ದೇಶಿಸಿತು (31.7.1997). ರಕ್ಷಿಸಲ್ಪಟ್ಟ ಎಲ್ಲ 473 ಮಕ್ಕಳ ಪುನರ್ವಸತಿ ಕೈಗೊಳ್ಳಲು ಮಹಾರಾಷ್ಟ್ರ ಸರ್ಕಾರಕ್ಕೆ ಸಾಧ್ಯವಾಗದಿದ್ದ ಕಾರಣ, ಈ ಎಲ್ಲರ ಪುನರ್ವಸತಿಯನ್ನು ಸೂಕ್ತವಾಗಿ ಮಾಡಲೇಬೇಕೆಂದೂ ಸಾಕೀತು ಮಾಡಿತು.

ITPPA ಕಾನೂನನ್ನು ಜಾರಿ ಮಾಡಲು ಸರ್ಕಾರಕ್ಕಿರುವ ನಿರ್ಲಕ್ಷ್ಯಕ್ಕೆ ಬೊಂಬಾಯಿ ಉಚ್ಚ ನ್ಯಾಯಾಲಯದ ತೀರ್ಪು ಒಂದು ಸ್ಪಷ್ಟ ನಿದರ್ಶನ. ನ್ಯಾಯಾಲಯದ ನಿರ್ದೇಶನಗಳನ್ನು ಸರ್ಕಾರ ಪಾಲಿಸಲಿಲ್ಲ. ಪುನರ್ವಸತಿ ಕಾರ್ಯಕ್ರಮಗಳಿಗೆ ಇನ್ನೂ ಅಂತಿಮ ರೂಪಕೊಡಬೇಕಿದೆ. ಸಲಹಾ ಸಮಿತಿಯನ್ನು ರಚಿಸಲಾಗಿಲ್ಲ. ವಿಶೇಷ ಪೊಲೀಸ್ ಅಧಿಕಾರಿಗಳನ್ನು ನೇಮಿಸಲಾಗಿಲ್ಲ.

ಸೂಳೆಗಾರಿಕೆಯಲ್ಲಿ ಮಕ್ಕಳ ಸಂಖ್ಯೆ ಹೆಚ್ಚಿರುವ ಕಾರಣ, ಕಾನೂನಿನಡಿ ಸೂಳೆಗಾರಿಕೆಗೆ ಬಿದ್ದ ಮಕ್ಕಳನ್ನು ಕುರಿತು ಇರುವ ವಿಚಾರಗಳನ್ನು ಹೆಚ್ಚಾಗಿ ಬಳಸಲಾಗುತ್ತಿದೆ. ಮಕ್ಕಳಿಗೆ ನ್ಯಾಯ ಕಾನೂನು, ಸೂಳೆಗಾರಿಗೆ ಬಿದ್ದ ಮಕ್ಕಳ ಹಾಗೂ ತಿರಸ್ಕರಿಸಲ್ಪಟ್ಟ ಮಕ್ಕಳ ಕುರಿತು ವ್ಯಾಖ್ಯಾನ ನೀಡಿ, ಬಾಲಕ/ಬಾಲಕಿಯರ ಗೃಹವು, ಈ ಮಕ್ಕಳಿಗೆ ವಸತಿ, ಸೌಲಭ್ಯಗಳು - ಶಿಕ್ಷಣ. ವೃತ್ತಿ ತರಬೇತಿ, ಆರೋಗ್ಯ, ನೀಡುವುದಲ್ಲದೆ ಅವರ ಪುನರ್ವಸತಿಗೂ ಪ್ರಯತ್ನಿಸಲಾಗುವುದು ಎಂದಿದೆ. ಜೊತೆಗೆ ಮಗುವಿನ ಚಾರಿತ್ರ್ಯ ನಿರ್ಮಾಣ ಹಾಗೂ ತನ್ನ ನೈತಿಕತೆಯನ್ನು ರಕ್ಷಿಸಿಕೊಳ್ಳಲು ಪೋಷಣೆಗೆ

ಬೇಕಾದ ತರಬೇತಿ, ಹಾಗೂ ಮಕ್ಕಳ ಸರ್ವತೋಮುಖ ಅಭಿವೃದ್ಧಿ ಬೆಳವಣಿಗೆಯನ್ನೂ ಖಾತ್ರಿಗೊಳಿಸುವ ಕೆಲಸಗಳನ್ನು ಮಾಡುವುದೆಂದು ಹೇಳಿದೆ. (ವಿಭಾಗ 6)

**ಗೌರವ್ ಜೈನ್ ಮತ್ತು ಭಾರತ ಸರ್ಕಾರ ನಡುವಿನ ಪ್ರಕರಣ.**

ಸೂಳೆಗಾರಿಕೆಗೆ ಬಿದ್ದವರ ಮಕ್ಕಳು ಮತ್ತು ಸೂಳೆಗಾರಿಕೆಗೆ ಈಡಾದ ಮಕ್ಕಳಿಗಾಗಿ ಪ್ರತ್ಯೇಕ ವ್ಯವಸ್ಥೆಗಳನ್ನು ಮಾಡಬೇಕೆಂದು ಮನವಿ ಮಾಡಿ ಗೌರವ್ ಜೈನ್ ಎಂಬ ವಕೀಲರು ಸರ್ವೋಚ್ಚ ನ್ಯಾಯಾಲಯದಲ್ಲೊಂದು ಸಾರ್ವಜನಿಕ ಹಿತಾಸಕ್ತಿ ಮೊಕದ್ದಮ್ಮೆಯನ್ನು ಹೂಡಿದ್ದರು (AIR 1997 SC 3021). ಈ ಮನವಿಯನ್ನು ತಳ್ಳಿ ಹಾಕಿದ ಸರ್ವೋಚ್ಚ ನ್ಯಾಯಾಲಯವು, ಮಕ್ಕಳನ್ನು ಈ ರೀತಿ ಪ್ರತ್ಯೇಕಿಸುವುದು ಕೂಡದು ಎಂದು ಹೇಳಿ ಸೂಳೆಗಾರಿಕೆಗೆ ಬಿದ್ದವರು ಹಾಗೂ ಅವರ ಮಕ್ಕಳ ಪರಿಸ್ಥಿತಿಯನ್ನು ಉತ್ತಮಗೊಳಿಸುವ ನಿಟ್ಟನಲ್ಲಿ ಮಹಾಜನ್ ಸಮಿತಿಯನ್ನು ನೇಮಿಸಿತು. ತಿರಸ್ಕರಿಸಲ್ಪಟ್ಟ ಹಾಗೂ ಸರ್ಕಾರ ತನ್ನ ವಶಕ್ಕೆ ತೆಗೆದುಕೊಂಡ ಸೂಳೆಗಾರಿಕೆಗೀಡಾದ ಮಕ್ಕಳ ಪುನರ್ವಸತಿ, ರಕ್ಷಣೆ ಹಾಗೂ ಅಭಿವೃದ್ಧಿಗೆ ಸೂಕ್ತ ಪ್ರಯತ್ನವನ್ನು ರಾಜ್ಯ ಸರ್ಕಾರಗಳು ನಡೆಸುತ್ತಿಲ್ಲ ಎಂಬುದನ್ನು ಗಣನೆಗೆ ತೆಗೆದುಕೊಂಡ ನ್ಯಾಯಾಲಯವು, ಸೂಳೆಗಾರಿಕೆಗೆ ಬಿದ್ದವರ ಮಕ್ಕಳು ಹಾಗೂ ಅವರೊಡನೆ ಒಡನಾಟವಿಟ್ಟುಕೊಂಡಿರುವ ಮಕ್ಕಳ ಅಭಿವೃದ್ಧಿಗಾಗಿ ಶಿಶು ಅಭಿವೃದ್ಧಿ ಹಾಗೂ ಆರೈಕೆ ಕೇಂದ್ರಗಳ (CDCC)ನ್ನು ಸ್ಥಾಪಿಸಬೇಕೆಂದೂ ನಿರ್ದೇಶಿಸಿತು.

**ಮಕ್ಕಳ ಹಕ್ಕುಗಳ ಒಡಂಬಡಿಕೆ**

ಭಾರತ 1991ರಲ್ಲಿ ಒಪ್ಪಿಕೊಂಡ ವಿಶ್ವ ಸಂಸ್ಥೆಯ ಮಕ್ಕಳ ಹಕ್ಕುಗಳ ಒಡಂಬಡಿಕೆ 1989 (CRC), ಮಕ್ಕಳ ಒಟ್ಟು ರಕ್ಷಣೆ, ಆರೈಕೆ ಮತ್ತು ಅಭಿವೃದ್ಧಿ ಹಾಗೂ ಶೈಕ್ಷಣಿಕ ಅವಕಾಶಗಳನ್ನು ನೀಡುವುದು, ಆರ್ಥಿಕ ಅಥವಾ ಇನ್ನಾವುದೇ ರೀತಿಯ ಶೋಷಣೆಗೆ ಮಕ್ಕಳು ಈಡಾಗದಂತೆ ನೋಡಿಕೊಳ್ಳುವುದು ಸರ್ಕಾರದ ಜವಾಬ್ದಾರಿ ಎಂದು ಹೇಳಿದೆ. ನಮಗೆ ಪ್ರಸ್ತುತವಾದ CRCಯ ಪರಿಚ್ಛೇದಗಳು 34 ಹಾಗೂ 36. ಅದರಲ್ಲಿ ಹೀಗೆ ಹೇಳಲಾಗಿದೆ.

''ಮಕ್ಕಳ ಶ್ರೇಯೋಭಿವೃದ್ಧಿಗೆ ಮಾರಕವಾದ ಯಾವುದೇ ರೀತಿಯ ಶೋಷಣೆ-ಲೈಂಗಿಕ ಶೋಷಣೆ ಮತ್ತು ಕಿರುಕುಳದಿಂದ ಮಕ್ಕಳನ್ನು ಸರ್ಕಾರವು ರಕ್ಷಿಸಲು ಮುಂದಾಗಬೇಕು.

''ಸರ್ಕಾರವು ಮಕ್ಕಳನ್ನು ಈ ಮುಂದಿನವುಗಳಿಂದ ರಕ್ಷಿಸಲು ರಾಷ್ಟ್ರೀಯ, ಅಂತಾರಾಷ್ಟ್ರೀಯ ಹಾಗೂ ಬಹುರಾಷ್ಟ್ರೀಯ ಮಟ್ಟದಲ್ಲಿ ಕ್ರಮ ಕೈಗೊಳ್ಳಬೇಕು -

- ಯಾವುದೇ ರೀತಿಯ ಕಾನೂನು ಬಾಹಿರ ಲೈಂಗಿಕ ಚಟುವಟಿಕೆಗೆ ಮಕ್ಕಳನ್ನು ಪ್ರೇರೇಪಿಸುವುದು ಮತ್ತು ತೊಡಗಿಸುವುದು;
- ಮಕ್ಕಳನ್ನು ಸೂಳೆಗಾರಿಕೆಗೆ ಅಥವಾ ಇನ್ನಿತರ ಕಾನೂನು ಬಾಹಿರ ಲೈಂಗಿಕ ಚಟುವಟಿಕೆಗೆ ಬಳಸುವುದು;
- ಮಕ್ಕಳನ್ನು ಲೈಂಗಿಕ ಸಾಹಿತ್ಯ, ಚಿತ್ರ ಮತ್ತಿತರ ಸಾಮಗ್ರಿ ತಯಾರಿಸಲು ಶೋಷಿಸುವುದು;
- ಮಕ್ಕಳನ್ನು ಯಾವುದೇ ರೀತಿಯಲ್ಲಿ ತಡೆ ಹಿಡಿದಿಡುವುದು, ಮಾರುವುದು ಅಥವಾ ಕಾನೂನು ಬಾಹಿರವಾಗಿ ಸಾಗಿಸುವುದು.

ಸ್ವೀಡನ್ನಿನ ಸ್ಟಾಕ್ ಹೋಮಿನಲ್ಲಿ 1996ರ ಆಗಸ್ಟ್‌ನಲ್ಲಿ ನಡೆದ ಮಕ್ಕಳ ಲೈಂಗಿಕ ಶೋಷಣೆ ವಿರುದ್ಧದ ಪ್ರಥಮ ಜಾಗತಿಕ ಸಭೆಯು ಮುಂದಿನ ಘೋಷಣೆಯನ್ನು ಅಂಗೀಕರಿಸಿತು. ಎಲ್ಲ ಸರಕಾರಗಳು ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯ ಸಂಸ್ಥೆಗಳು ಮತ್ತು ನಾಗರೀಕ್ ಸಮಾಜ ಈ ಮುಂದಿನವುಗಳನ್ನು ನಡೆಸಿಕೊಡಬೇಕೆಂದು ಈ ಘೋಷಣೆ ಕರೆನೀಡಿದೆ.

- ಮಕ್ಕಳ ಲೈಂಗಿಕ ಶೋಷಣೆ ವಿರುದ್ಧ ಕೈಗೊಳ್ಳುವ ಕ್ರಮಗಳಿಗೆ ಅತ್ಯಂತ ಉನ್ನತವಾದ ಆದ್ಯತೆ ನೀಡಿ ಮತ್ತು ಅದಕ್ಕೆ ಬೇಕಾದ ಸಂಪನ್ಮೂಲಗಳನ್ನು ಕೊಡಮಾಡಿ,
- ಮಕ್ಕಳು ಲೈಂಗಿಕ ವ್ಯಾಪಾರಕ್ಕೆ ಬೀಳುವುದನ್ನು ತಡೆಯಲು ಹಾಗೂ ವ್ಯಾಪಾರೀ ಲೈಂಗಿಕ ಶೋಷಣೆಗೆ ಮಕ್ಕಳು ಈಡಾಗದಂತೆ ತಡೆಯಲು ಕುಟುಂಬಗಳ ಪಾತ್ರವನ್ನು ಬಲಗೊಳಿಸುವುದಕ್ಕೆ ನಾಗರೀಕ ಸಮಾಜ ಹಾಗೂ ಸರ್ಕಾರಗಳ ನಡುವಿನ ಸಂಬಂಧವನ್ನು ಗಟ್ಟಿಗೊಳಿಸಿ,
- ಮಕ್ಕಳ ವ್ಯಾಪಾರೀ ಲೈಂಗಿಕ ಶೋಷಣೆ ಹಾಗೂ ಮಕ್ಕಳ ಮೇಲಿನ ಮತ್ತಿತರ ಲೈಂಗಿಕ ಶೋಷಣೆಗಳನ್ನು ಅಪರಾಧ ಎಂದು ಪರಿಗಣಿಸಿ, ಈ ಅಪರಾಧ ಮಾಡಿದವರು ಸ್ಥಳೀಯರಾಗಲೀ ಅಥವಾ ವಿದೇಶೀಯರಾಗಲಿ, ಅವರನ್ನು ಖಂಡಿಸಿ, ಶಿಕ್ಷೆ ವಿಧಿಸಲೇಬೇಕು. ಈ ಪ್ರಕ್ರಿಯೆಯಲ್ಲಿ ಶೋಷಣೆಗೊಳಗಾದ ಮಗು ಶಿಕ್ಷೆಗೊಳಗಾಗದಂತೆ ನೋಡಿಕೊಳ್ಳಿ,
- ಮಕ್ಕಳ ವ್ಯಾಪಾರೀ ಲೈಂಗಿಕ ಶೋಷಣೆಯನ್ನು ಅಳಿಸಿಹಾಕಲು ಈಗಿರುವ ಕಾನೂನು, ನೀತಿ ನಿಯಮ, ಕಾರ್ಯಕ್ರಮಗಳು ಮತ್ತು ಜಾರಿ ವ್ಯವಸ್ಥೆಯನ್ನು ವಿಮರ್ಷಿಸಿ, ಎಲ್ಲೆಲ್ಲಿ ಸೂಕ್ತ ಬದಲಾವಣೆ ಮಾಡಬೇಕು ಅದನ್ನು ಮಾಡಿ,
- ಮಕ್ಕಳನ್ನು ವ್ಯಾಪಾರೀ ಲೈಂಗಿಕ ಶೋಷಣೆಯಿಂದ ರಕ್ಷಿಸಲು ಸೂಕ್ತ ಕಾನೂನು' ನಿಯಮ ಮತ್ತು ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಿ ಹಾಗೂ ಕಾನೂನು ಜಾರಿ ಸಂಸ್ಥೆಗಳ ನಡುವೆ ಸೂಕ್ತ ಸಂವಹನ, ಸಂಬಂಧಗಳನ್ನು ಗಟ್ಟಿಗೊಳಿಸಿ,
- ಮಕ್ಕಳ ವ್ಯಾಪಾರೀ ಲೈಂಗಿಕ ಶೋಷಣೆ ವಿರುದ್ಧ ಕಾನೂನು ಜಾರಿ ಹಾಗೂ ಕಾರ್ಯಕ್ರಮಗಳನ್ನು ಅಳವಡಿಸಿಕೊಳ್ಳಲು ಸ್ಥಳೀಯ, ರಾಷ್ಟ್ರೀಯ ಹಾಗೂ ಪ್ರಾದೇಶಿಕ ವ್ಯವಸ್ಥೆಗಳ ಸಹಾಯದ ಮೂಲಕ ಪ್ರಚಾರಮಾಡಿ.
- ಮಕ್ಕಳ ವ್ಯಾಪಾರೀ ಲೈಂಗಿಕ ಶೋಷಣೆ ತಪ್ಪಿಸಲು ಸಮಗ್ರವಾದ

ಲಿಂಗಸಂವೇದಿ ಕಾರ್ಯಕ್ರಮಗಳನ್ನು ಸಿದ್ಧಪಡಿಸಿ ಅನುಷ್ಠಾನಗೊಳಿಸಿ, ದುರಂತಕ್ಕೀಡಾದ ಮಕ್ಕಳನ್ನು ರಕ್ಷಿಸಿ, ಅವರು ಸಮಾಜದಲ್ಲಿ ಮತ್ತೆ ಸೇರಲು ಬೇಕಾದ ವ್ಯವಸ್ಥೆ, ಸಹಾಯ ಮಾಡಿ,

- ಶಿಕ್ಷಣ, ಸಾಮಾಜಿಕ ಚಳವಳಿ ಹಾಗೂ ಅಭಿವೃದ್ಧಿ ಚಟವಟಿಕೆಗಳ ಮೂಲಕ ಮಕ್ಕಳ ಹಕ್ಕುಗಳ ಜಾರಿ ಮಾಡಲು ಕಾನೂನು ರೀತ್ಯ ಜವಾಬ್ದಾರಿ ಹೊಂದಿರುವ ಪೋಷಕರು ಮತ್ತಿತರರು ಮಕ್ಕಳನ್ನು ವ್ಯಾಪಾರೀ ಲೈಂಗಿಕ ಶೋಷಣೆಯಿಂದ ರಕ್ಷಿಸುವ ಬಾಧ್ಯತೆ ಹೊರುವಂತಹ ವಾತಾವರಣ ಸೃಷ್ಟಿಸಿ,
- ಮಕ್ಕಳ ವ್ಯಾಪಾರೀ ಲೈಂಗಿಕ ಶೋಷಣೆಯನ್ನು ತೊಡೆದು ಹಾಕಲು ರಾಜಕೀಯ ಮತ್ತಿತ್ತರ ಬೆಂಬಲಿಗರು, ಹಾಗೂ ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಸಮುದಾಯಗಳು, ಅಂತರ ಸರ್ಕಾರೀ ಇಲಾಖೆಗಳು ಮತ್ತು ಸರ್ಕಾರೇತರ ಸಂಸ್ಥೆಗಳು ಎಲ್ಲರೂ ಒಟ್ಟಾಗಿ ರಾಷ್ಟ್ರೀಯ ಸರ್ಕಾರಗಳಿಗೆ ಬೆಂಬಲ ನೀಡಿರಿ,
- ಮಕ್ಕಳನ್ನು ಒಳಗೊಂಡಂತೆ ಸಾರ್ವಜನಿಕರ ಬೆಂಬಲವನ್ನು ಮಕ್ಕಳ ಮೇಲಿನ ವ್ಯಾಪಾರೀ ಲೈಂಗಿಕ ಶೋಷಣೆ ತಡೆಗಟ್ಟಲು ಹಾಗೂ ತೊಡೆದುಹಾಕಲು ಬೆಳೆಸಿ.

ಈ ಮಹಾಧಿವೇಶನಕ್ಕೆ 122 ದೇಶಗಳಿಂದ 1879 ಪ್ರತಿನಿಧಿಗಳು ಭಾಗವಹಿಸಿದ್ದರು - 718 ಸರ್ಕಾರೀ ಸಂಸ್ಥೆಗಳು, 417 ಸರ್ಕಾರೇತರ ಸಂಸ್ಥೆಗಳ ಪ್ರತಿನಿಧಿಗಳು, 47 ಯುವಕರು ಹಾಗೂ ಜಾಗತಿಕ ಮಾಧ್ಯಮಗಳಿಂದ 538 ಪ್ರತಿನಿಧಿಗಳು.

**ವ್ಯಾಪಾರೀ ಲೈಂಗಿಕ ಶೋಷಣೆಗೀಡಾದ ಮಕ್ಕಳಿಗೆ ಸಮಾಜ ಕಾರ್ಯದ ಸಹಾಯ.**

ಕೆಂಪು ದೀಪದ ಪ್ರದೇಶದ ಮಕ್ಕಳ ಜೀವನದ ಉತ್ತಮಿಕೆಗಾಗಿ ಪ್ರಯತ್ನಪಡುತ್ತಿರುವ ಪ್ರೇರಣಾದ ಕೆಲಸಗಳು ಇಡೀ ಭಾರತದಲ್ಲಿ ಸಮಗ್ರವಾದ ರೀತಿಯದ್ದಾಗಿದೆ ಎಂದೆನಿಸುತ್ತದೆ. ಮಕ್ಕಳ ಅಕ್ರಮ ಸಾಗಣೆ, ಸೂಳೆಗಾರಿಕೆ, ಮತ್ತು ಸೂಳೆಗಾರಿಕೆಯಲ್ಲಿ ಮಕ್ಕಳು ಮತ್ತು ಹೆಂಗಸರ ಶೋಷಣೆಯೇ ಮೊದಲಾದ ವಿಚಾರಗಳನ್ನು ಕುರಿತು ಕೆಲಸ ಮಾಡುತ್ತಿರುವ ಸರ್ಕಾರೇತರ ಸಂಸ್ಥೆ ಪ್ರೇರಣಾ. ಮುಂಬಯಿಯ ಕಾಮಾಟಿಪುರದಲ್ಲಿ 1986ರಲ್ಲಿ ಪ್ರೇರಣಾ ತನ್ನ ಕೆಲಸ ಆರಂಭಿಸಿತು. ಎರಡನೇ ತಲೆಮಾರಿನವರು ಸೂಳೆಗಾರಿಕೆಗಿಳಿಯುವುದನ್ನು ತೊಡೆಯುವುದು ಇದರ ಗುರಿ. ಭಾರತದ ಸರ್ವೋಚ್ಚ ನ್ಯಾಯಾಲಯದ ನಿರ್ದೇಶನದಂತೆ, 1998ರಲ್ಲಿ ಕೆಂಪು ದೀಪದ ಪ್ರದೇಶಗಳಲ್ಲಿ ಸಮಾಜ ಕಾರ್ಯಕ್ಕಾಗಿ ಒಂದು ಸಮಗ್ರ ರಾಷ್ಟ್ರೀಯ ಕಾರ್ಯಕ್ರಮವನ್ನು ಭಾರತ ಸರ್ಕಾರವು ಪ್ರಕಟಿಸಿತು. ಈ ನಿಟ್ಟಿನಲ್ಲಿ ಆರಂಭವಾದ ವಿವಿಧ ಕಾರ್ಯಕ್ರಮಗಳು ಹೆಚ್ಚೂ ಕಡಿಮೆ ಪ್ರೇರಣದ ಮಾದರಿಯನ್ನೇ ಅನುಸರಿಸಿದೆ. ಇದಕ್ಕೆ ಮುಖ್ಯ ಕಾರಣ, ರಾಜ್ಯ, ದೇಶ ಹಾಗೂ ಅಂತಾರಾಷ್ಟ್ರೀಯ ಮಟ್ಟದಲ್ಲಿ ಪ್ರೇರಣಾ ಕೈಗೊಂಡ ಸತತವಾದ ಪ್ರಚಾರಾಂದೋಲನ.

ಪರಿಸ್ಥಿತಿಗಳ ಒತ್ತಡದಿಂದಾಗಿ, ಆರ್ಥಿಕ ಸಂಕಷ್ಟಗಳಿಗೊಳಗಾಗಿ, ಸಂಪ್ರದಾಯಗಳಿಗೆ ಬಲಿಪಶುಗಳಾಗಿ, ಸೂಳೆಗೇರಿಗಳನ್ನು ನಡೆಸುವುದೇ ದಂಧೆ ಮಾಡಿಕೊಂಡಿರುವ ಅಪರಾಧೀ ಗುಂಪುಗಳಿಗೆ ಸಿಕ್ಕಿಬಿದ್ದು ಮೈಮಾರುವಂತಾಗುವವರೊಡನೆ ಪ್ರೇರಣಾದ ಕೆಲಸಗಳು ನಡೆದಿದೆ. ತೀರಾ ಅಮಾನವೀಯ ಬಂಧೀಖಾನೆಗಳಂತಹ ಪರಿಸರದಲ್ಲಿ ಸದಾಕಾಲ ಶೋಷಣೆ ಸುಲುಗೆಗೆ ಒಳಗಾಗುತ್ತಾ, ಭವಿಷ್ಯವೇ ಇಲ್ಲದ ಸಾಮಾಜಿಕ, ಮಾನಸಿಕ ಪರಿಸ್ಥಿತಿಯ ಈ ದಂಧೆಯಲ್ಲಿ ಸಿಕ್ಕಿ ಬಿದ್ದಿರುವವರೊಡನೆ ಕೆಲಸದಲ್ಲಿ ಪ್ರೇರಣಾ ನಿರತವಾಗಿದೆ.

ಇಂತಹ ಅಮಾನವೀಯ ಪರಿಸರದ ಜೀವನದಿಂದ ಬಿಡುಗಡೆ ಹೊಂದಲು ಈ ಹೆಂಗಸರಿಗೆ ಪ್ರೇರಣಾ ಸಹಾಯ ಮಾಡುವುದಲ್ಲದೆ, ಅವರ ಪ್ರಾಥಮಿಕ ಬೇಡಿಕೆಗಳನ್ನು ಈಡೇರಿಸಿ, ಅವರ ಮಾನವ ಹಕ್ಕುಗಳಿಗೆ ಗೌರವ ಸಿಗುವಂತೆ, ದೇಶದ ಇತರ ಪ್ರಜೆಗಳಂತೆ ಅವರಿಗೂ ನಾಗರೀಕ ಸ್ಥಾನಮಾನ ದೊರಕುವಂತೆಯೂ ಮಾಡುತ್ತಿದೆ. ಇಂತಹವರ ಮಕ್ಕಳಿಗಾಗಿ ಪ್ರೇರಣಾದ ಪ್ರಯತ್ನ ಅವರೂ ಸಹ ಮೈಮಾರುವ ದಂಧೆಗೆ ಇಳಿಯದಂತೆ ನೋಡಿಕೊಳ್ಳುವುದು. ಇದಕ್ಕಾಗಿ ಅವರ ಮೈಮನಸ್ಸುಗಳ ಸೂಕ್ತ ಬೆಳವಣಿಗೆ, ಅಂತಹ ಅಭಿವೃದ್ಧಿಗೆ ಬೇಕಾದ ಸೂಕ್ತ ವಾತಾವರಣದ ನಿರ್ಮಾಣ, ಅವರ ಶಕ್ತಿ ಸಾಮರ್ಥ್ಯಗಳನ್ನು ಸಮಾಜ ಗುರುತಿಸಿ ಒಪ್ಪುವಂತಹ ಕೆಲಸಗಳಲ್ಲೂ ಪ್ರೇರಣಾ ತೊಡಗಿದೆ.



ಪ್ರೇರಣಾದ ಅಡಿಯಲ್ಲಿ ಈ ಮುಂದಿನ ಚಟುವಟಿಕೆಗಳನ್ನು ಮೊದಲ ಬಾರಿಗೆ ಕೈಗೊಳ್ಳಲಾಗುತ್ತಿದೆ.

**ರಾತ್ರಿ ರಕ್ಷಣಾ ಕೇಂದ್ರ**

1989ರಲ್ಲಿ ಆರಂಭವಾದ ಈ ಕೇಂದ್ರ ಕೆಂಪು ದೀಪದ ಪ್ರದೇಶದಲ್ಲಿ ಸೂಳೆಗಾರಿಕೆಗೆ ಬಿದ್ದವರ ಮಕ್ಕಳಿಗಾಗಿ ನಡೆಸಲ್ಪಡುವ ಭಾರತದಲ್ಲಿನ ಮೊದಲ ಕೇಂದ್ರವಾಗಿದೆ. ಸಂಪನ್ಮೂಲಗಳಿಲ್ಲದ ಮತ್ತು ಬಲಹೀನರಾದ ಈ ಹೆಂಗಸರು ತಮ್ಮ ಮಕ್ಕಳಿಗೆ, ಬಾಲ್ಯದಿಂದಲೇ ಓಪಿಯಂ ತಿನ್ನಿಸಿ ತಮ್ಮ ಮಂಚದ ಕೆಳಗೇ ಮಲಗಿಸುವರು. ಇಲ್ಲದಿದ್ದರೆ ಗಿರಾಕಿಗೆ ಕಿರಿಕಿರಿ. ತುಸು ಬೆಳೆದ ಮಕ್ಕಳು ರಾತ್ರಿ ಬಹುಹೊತ್ತಿನವರೆಗೆ ಅಲ್ಲಲ್ಲಿ ಅಡ್ಡಾಡಿ, ರಸ್ತೆ ಬದಿ ಎಲ್ಲೋ ಅತ್ಯಂತ ದುಸ್ಥಿತಿಯಲ್ಲಿ ನಿದ್ದೆ ಹೋಗುತ್ತಾರೆ. ಇವೆಲ್ಲಾ ಕೇವಲ ಗಿರಾಕಿಯನ್ನು ಸಂತುಷ್ಟಗೊಳಿಸಲು ಮತ್ತು ಸೂಳೆಗೇರಿಯ ಯಜಮಾನರ ಮಾತು ಕೇಳಲು. ಪ್ರೇರಣಾ ಆರಂಭಿಸಿದ ಕೇಂದ್ರ, ಮಕ್ಕಳಿಗೆ ಆರೋಗ್ಯಕರವೂ, ರಕ್ಷಿತ ಪ್ರದೇಶವೂ ಆಗುವುದರೊಂದಿಗೆ,

ಸೂಳೆಗೇರಿಗಳಲ್ಲಿ ಜರುಗುವ ಆ ಕೆಲಸದ ಭಯಾನಕ ವಿವರಗಳನ್ನು ತೀರಾ ಅಸಾಮಾನ್ಯ ಪರಿಸ್ಥಿತಿಯಲ್ಲಿ ನೋಡುವುದನ್ನು ತಪ್ಪಿಸುತ್ತದೆ.

### ಸಂಸ್ಥೆಗಳಿಗೆ ಸೇರಿಸುವ ಕಾರ್ಯಕ್ರಮ

ಹೆಣ್ಣು ಮಗುವಿನ ಜನನವನ್ನು ಹಬ್ಬವನ್ನಾಗಿ ಆಚರಿಸುವ ಒಂದು ಜಾಗ ಈ ಭೂಮಂಡಲದಲ್ಲಿದೆ ಎನ್ನುವುದಾದರೆ, ಅದು ಕೆಂಪು ದೀಪದ ಪ್ರದೇಶ ಮಾತ್ರಾ. ಇಲ್ಲಿ ಹೆಣ್ಣು ಹುಟ್ಟಿತೆಂದರೆ ಸೂಳೆಗಾರಿಕೆ ಸೇರುವುದಂತೂ ಖಂಡಿತಾ. ಗಂಡು ಮಗುವಿಗೆ ಅಷ್ಟೇನೂ ಪ್ರಾಮುಖ್ಯತೆಯಿಲ್ಲ. ಆದರೂ ಹೊರಗಿನವರನ್ನು ತಂದು ತಲೆ ಹಿಡುಕ ಕೆಲಸಕ್ಕಿಡುವ ಬದಲು ಇವರೇ ಆಗಬಹುದು. ಕೆಂಪು ದೀಪದ ಪ್ರದೇಶದ ಸೂಳೆಗೇರಿಯ ಹೆಂಗಸರೊಡನೆ ಮಕ್ಕಳ ಭವಿಷ್ಯದ ಬಗ್ಗೆ ಮಾತನಾಡಿದಾಗ, ತಮ್ಮ ಮಕ್ಕಳನ್ನು ಈ ಪರಿಸರದಿಂದ ಹೊರಗಡೆ ಎಲ್ಲಾದರೂ ಇಡುವ ಬೇಡಿಕೆ ವ್ಯಕ್ತಪಡಿಸಿದರು. ಅವರೊಡನೆ ಸಲಹೆ ಸಮಾಲೋಚನೆ ನಡೆಸುತ್ತಿದ್ದಾಗ, ಮಕ್ಕಳನ್ನು ಸಂಸ್ಥೆಗಳ ಆಶ್ರಯದಲ್ಲಿಡುವ ಬಗ್ಗೆ ಅವರು ಒಲವು ತೋರಿಸಿದರು. ಈ ರೀತಿಯ ಹಿನ್ನೆಲೆಯಿರುವ ಮಕ್ಕಳನ್ನು ಸಂಸ್ಥೆಗೆ ಸೇರಿಸಿಕೊಳ್ಳಲು ಅಲ್ಲಿನ ಮುಖ್ಯಸ್ಥರು ಸುತರಾಂ ಒಪ್ಪಿರಲಿಲ್ಲ. ಕೆಲವು ಔಪಚಾರಿಕ ಕಾರ್ಯಗಾರಗಳನ್ನು ನಡೆಸಿ, ಆ ಮಕ್ಕಳನ್ನು ಸಂಸ್ಥೆಗೆ ಸೇರಿಸಲು ಅಂತಹವರನ್ನು ಪುಸಲಾಯಿಸಬೇಕಾಯಿತು.

ಒಮ್ಮೆ ಮಕ್ಕಳನ್ನು ಸಂಸ್ಥೆಗೆ ಸೇರಿಸಿದ ಮೇಲೆ, ಆ ಮಕ್ಕಳ ವಿಶೇಷ ಸ್ಥಾನಮಾನದ ಬಗ್ಗೆ ತಿಳಿಸಲು ಸಂಸ್ಥೆಯ ಉದ್ಯೋಗಿಗಳಿಗೆ ಪ್ರೇರಣಾ ವಿಶೇಷ ಕಾರ್ಯಕ್ರಮಗಳನ್ನು ನಡೆಸಿತು. ಪ್ರತಿ ಮಗುವಿನ ವೈಯಕ್ತಿಕ ಹಕ್ಕುಗಳನ್ನು ಗೌರವಿಸುವುದು ಹಾಗೂ ಮಕ್ಕಳ ಹಿನ್ನೆಲೆಯನ್ನು ಗುಪ್ತವಾಗಿಡುವ ಅವಶ್ಯಕತೆ ತಿಳಿಸಲಾಯಿತು. ಸಂಸ್ಥೆಯಲ್ಲಿ ತಾಯಿ-ಮಕ್ಕಳ ಭೇಟಿ ನಿರಾಕರಿಸದೆ ಇದನ್ನು ಸಾಧಿಸಬೇಕಿತ್ತು. ಈಗ ಇಂತಹ ಮಕ್ಕಳಿಗೆ ಪ್ರವೇಶ ನೀಡಲು ಇನ್ನೂ ಅನೇಕ ಸಂಸ್ಥೆಗಳನ್ನು ಒಪ್ಪಿಸಲು ಪ್ರೇರಣಾ ಸಫಲವಾಗಿದೆ. ಆ ಮಕ್ಕಳೀಗ ಕೆಂಪು ದೀಪದ ಪ್ರದೇಶದ ಪ್ರಭಾವದಿಂದ ದೂರವಿದ್ದಾರೆ. ಇದರಿಂದಾಗಿ ಮೈ ಮಾರುವ ದಂಧೆಯಿಂದ ಈ ಮಕ್ಕಳು ಶಾಶ್ವತವಾಗಿ ದೂರವಾಗುವ ಸಾಧ್ಯತೆಗಳು ಅತಿ ಹೆಚ್ಚು.

ಕೆಲವು ವರ್ಷಗಳಿಂದೀಚೆಗೆ, ನಾವು ಯಾವ ಹೆಂಗಸರೊಂದಿಗೆ ಕೆಲಸ ಮಾಡುತ್ತಿರುವೆವೋ ಅವರಲ್ಲಿ ಅನೇಕರು ಏಡ್ಸ್ ರೋಗಕ್ಕೆ ಬಲಿಯಾಗುತ್ತಿರುವುದರಿಂದಾಗಿ, ಎಚ್.ಐ.ವಿ. ಪಾಸಿಟೀವ್ ಆಗಿರುವ ಮಹಿಳೆಯರ ಮಕ್ಕಳಿಗೆ ಸಂಸ್ಥೆಗಳಲ್ಲಿ ಪ್ರವೇಶ ಕೊಡಿಸುವುದು ಅನಿವಾರ್ಯವಾಗಿದೆ. ಅಕಸ್ಮಾತ್ ತಾಯಿ ರೋಗದಿಂದ ಸತ್ತರೆ ಸೂಳೆಗೇರಿಯ ಬಂಧನದಿಂದ ಅವರ ಮಕ್ಕಳನ್ನು ಬಿಡಿಸಿ ಕೊಳ್ಳುವುದು ಭಾರೀ ಕಷ್ಟ. ಆದರೆ, ಇಂತಹ ಮಕ್ಕಳನ್ನು ಸಂಸ್ಥೆಗೆ ಸೇರಿಸುವುದಕ್ಕೆ, ಎಚ್.ಐ.ವಿ./ಏಡ್ಸ್ ಅವರಿಂದ ಇತರ ಮಕ್ಕಳಿಗೂ ಬಂದೀತು ಎನ್ನುವ ಭಯದಿಂದಾಗಿ ಸಾಕಷ್ಟು ವಿರೋಧವೂ ಬಂದಿದೆ. ಇಂತಹ ಮಕ್ಕಳ ಮೇಲೆ ಕಡ್ಡಾಯವಾಗಿ ಎಚ್.ಐ.ವಿ. ಪರೀಕ್ಷೆ ನಡೆಸುವ ಪ್ರಯತ್ನಗಳು ಮೇಲಿಂದ ಮೇಲೆ ಆಗುವುದು ನಮ್ಮ ಗಮನಕ್ಕೆ ಬರುತ್ತಿದೆ. ಇಂತಹವುಗಳನ್ನು ಪ್ರೇರಣಾ ಪ್ರಬಲವಾಗಿ ವಿರೋಧಿಸುವುದಲ್ಲದೆ, ಇದನ್ನು ನಿಲ್ಲಿಸಲು ರಾಜ್ಯ ಸರ್ಕಾರದ ಮೇಲೆ ಒತ್ತಡ ಹೇರುತ್ತಿದೆ. ಕೆಲವೇ ಕೆಲವು ಅಪವಾದ ಬಿಟ್ಟರೆ, ಬಹುತೇಕ ಸಂಸ್ಥೆಗಳು ಬಹಿರಂಗವಾಗಿ ಇಲ್ಲವೇ ಏನಾದರೊಂದು ರೂಪದಲ್ಲಿ ಮಕ್ಕಳ ಸೇರ್ಪಡೆ ಅಥವಾ ಮುಂದುವರಿದ ಇರುವಿಕೆಗೆ ತೊಂದರೆ ನೀಡುತ್ತಲೇ ಇವೆ.

### ಮಕ್ಕಳಿಗೆ ಶಿಕ್ಷಣ

ಮಕ್ಕಳ ಶಿಕ್ಷಣದ ಹಕ್ಕನ್ನು ಖಾತ್ರಿಗೊಳಿಸಲು ಶಿಕ್ಷಣ ಸಹಾಯ ಕಾರ್ಯಕ್ರಮ (ESP)ದ ಮೂಲಕ ಮಕ್ಕಳು ಶಾಲೆಯಲ್ಲಿ ಉಳಿಯಲು ಎಂತಹ ಸಹಕಾರ ಬೇಕೋ ಅವುಗಳನ್ನು ನೀಡಲು ಪ್ರೇರಣ ಆರಂಭಿಸಿತು. ಇವಲ್ಲದೆ ಶಾಲಾ ಪೂರ್ವ ಚಟುವಟಿಕೆಗಳು ಹಾಗೂ ಅನೌಪಚಾರಿಕ ಶಿಕ್ಷಣ ಕಾರ್ಯಕ್ರಮಗಳನ್ನೂ ಸಹ ಪ್ರೇರಣಾ ನಡೆಸಿದೆ.

### ರಾಜ್ಯ ಮಟ್ಟದ ಸಂಯೋಜನೆ

ಮಕ್ಕಳು ಮತ್ತು ಮಹಿಳೆಯರ ಮೇಲೆ ವ್ಯಾಪಾರೀ ಲೈಂಗಿಕ ಶೋಷಣೆ ವಿಪರೀತವಾಗಿ ಹೆಚ್ಚಾಗುತ್ತಿದೆ. ಇದಕ್ಕೆ ಕಾರಣ ಹೆಚ್ಚಿನ ಪಾಲು ಪ್ರವಾಸೋದ್ಯಮದಿಂದ ಆಗಿದ್ದರೂ, ಬಡತನ, ಸಂಸಾರದಿಂದ ತೊರೆಯಲ್ಪಟ್ಟಿರುವುದು, ಗ್ರಾಮೀಣ ಪ್ರದೇಶಗಳಲ್ಲಿ ಸಮುದಾಯ ಜೀವನದಲ್ಲಿನ ಒಡಕೂ ಸಹ ಇದರಲ್ಲಿ ಸೇರಿದೆ. ಹೆಚ್.ಐ.ವಿ./ಏಡ್ಸ್ ದೂರದೂರದ ಗ್ರಾಮೀಣ ಪ್ರದೇಶಗಳಿಗೂ ಹಬ್ಬಿದೆ. ಮಹಿಳೆಯರು ಮತ್ತು ಮಕ್ಕಳ ಅಕ್ರಮ ಸಾಗಣೆ ಮತ್ತು ಸೂಳೆಗಾರಿಕೆಗಿಳಿಸುವ ಪ್ರಕ್ರಿಯೆಗಳನ್ನು ಪರಿಣಾಮಕಾರಿಯಾಗಿ ತಡೆಗಟ್ಟಲು, ಗ್ರಾಮೀಣ ಪ್ರದೇಶಗಳ ಅನೇಕ ಸರ್ಕಾರೇತರ ಸಂಸ್ಥೆಗಳೊಡನೆ ಸಂಪರ್ಕ ಜಾಲ ಏರ್ಪಡಿಸುವತ್ತ ಪ್ರೇರಣಾ ಹೊರಟಿದೆ.

ಕೆಂಪು ದೀಪದ ಪ್ರದೇಶಗಳಲ್ಲಿ ಕೆಲಸ ಕೈಗೊಳ್ಳಲು ಸರ್ಕಾರೇತರ ಸಂಸ್ಥೆಗಳಿಗೆ ಆರ್ಥಿಕ ಸಹಾಯ ಪಡೆಯಲೂ ಪ್ರೇರಣಾ ಸಹಕರಿಸುತ್ತಿದೆ. ಇಂತಹ ಸಂಸ್ಥೆಗಳ ಮುಖ್ಯಸ್ಥರು, ಸಿಬ್ಬಂದಿ, ಸ್ವಯಂ ಸೇವಕರು ಮತ್ತು ಸಮಾಜಿಕ ಸಹಾಯಕರಿಗೆ ಕಾನೂನು ಮತ್ತಿತರ ಸಂಬಂಧಿತ ವಿಚಾರಗಳ ಬಗ್ಗೆ ತರಬೇತಿಗಳನ್ನು ಪ್ರೇರಣ ನಡೆಸುತ್ತಿದೆ. ಈ ಸಂಸ್ಥೆಗಳ ನಡುವೆ, ಮಾಹಿತಿ ಮತ್ತು ಅನುಭವಗಳ ಪರಸ್ಪರ ವಿನಿಮಯಕ್ಕಾಗಿ ಸಿಬ್ಬಂದಿ, ಸ್ವಯಂ ಸೇವಕರು, ಮಹಿಳೆಯರು ಪರಸ್ಪರ ಸಂಸ್ಥೆಗಳಿಗೆ ಭೇಟಿ ಮತ್ತು ಇವರೆಲ್ಲರೊಡನೆ ಒಂದೇ ರೀತಿಯ ಕಾರ್ಯಕ್ರಮಗಳನ್ನೂ ಸಹ ಪ್ರೇರಣಾ ಆಯೋಜಿಸಿದೆ.

### ಅಕ್ರಮ ಸಾಗಣೆ ವಿರುದ್ಧ ಕಾರ್ಯಾಚರಣೆಗಳು

ಸೂಳೆಗಾರಿಕೆಗಾಗಿ ಮಕ್ಕಳು ಮತ್ತು ಮಕ್ಕಳನ್ನು ಅಕ್ರಮವಾಗಿ ಸಾಗಿಸುವುದು ಹಲವಾರು ರೂಪಗಳಲ್ಲಿದೆ. ಇದರ ಬಾಹ್ಯ ಸ್ವರೂಪ ದೊಡ್ಡದಾಗಿ ಕಾಣುವುದು ಮಹಾನಗರಗಳ ಕೆಂಪುದೀಪದ ಪ್ರದೇಶಗಳಲ್ಲಾದರೂ ಇಡೀ ಸಮಸ್ಯೆಯ ಬೇರುಗಳು ಬಹು ವಿಶಾಲವಾಗಿ ಹರಡಿಕೊಂಡಿದೆ. ಈ ಬಲೆಗೆ ಬಿದ್ದ ಮಕ್ಕಳನ್ನು

ಬಿಡಿಸಲು ಸೂಳೆಗೇರಿಗಳ ಮೇಲೆ ಪೋಲೀಸ್ ಸಹಾಯ, ಧಾಳಿ, (ರೇಯ್ಡ್) ರೂಪದಲ್ಲಿ ಬಂದರೂ, ಒಂಟಿ ಪ್ರಕರಣಗಳಲ್ಲಿ ಇದು ತೀರಾ ತಡವಾಗುವುದೇ ಅಲ್ಲದೆ, ಇಂತಹ ಧಾಳಿಗಳನ್ನು ಯಾವುದೇ ಯೋಜನೆ, ಚಿಂತನೆಗಳಿಲ್ಲದೆ, ನಡೆಸುವುದರಿಂದ ಎಷ್ಟೋಬಾರಿ ಇದರಿಂದ ತೊಂದರೆಯಾಗುವುದೇ ಅಧಿಕ.

ಕೆಲವು ಸರ್ಕಾರೇತರ ಸಂಸ್ಥೆಗಳೊಡನೆ ಸೇರಿ, ಮೇಲೆ ಹೇಳಿರುವ ಕೆಲವು ಅಪರಾಧಿ ಮಾರ್ಗಗಳ ಮೇಲೆ ನಿಗಾ ಇಡುವುದನ್ನು ಪ್ರೇರಣಾ ಇತ್ತೀಚೆಗೆ ಕೈಗೆತ್ತಿಕೊಂಡಿದೆ. ಇಂತಹ ಜಾಲದಲ್ಲಿ ಸಿಕ್ಕಿಬಿದ್ದವರ ಮತ್ತು ಯಾರದಾದರೂ ಅಕ್ರಮ ಸಾಗಣೆಯಾಗುತ್ತಿದೆ ಎಂದು ಶಂಕೆ ಬಂದಲ್ಲಿ ಅವರ ನೆರವಿಗಾಗಿ ಒಂದು ಸಹಾಯವಾಣಿ ಸ್ಥಾಪಿಸುವುದೂ ಸಹ ಇದರ ಅಂಗವಾಗಿದೆ. ಅಕ್ರಮ ಸಾಗಣೆಗೆ ಬಲಿಯಾಗಬಹುದಾದವರ ನೆರವಿಗೆ / ಮಾಹಿತಿಗಾಗಿ ಟೆಲಿಫೋನ್ ಬೂತುಗಳು, ರೈಲ್ವೆ ನಿಲ್ದಾಣಗಳು, ಮಾರುಕಟ್ಟೆಗಳು, ವಸತಿ ಗೃಹಗಳು ಮುಂತಾದೆಡೆ ಹಲವಾರು ಭಿತ್ತಿ ಪತ್ರಗಳು ಹಾಗೂ ಫಲಕಗಳನ್ನು ಹಾಕಲಾಗಿದೆ. ಅಕ್ರಮ ಸಾಗಣೆ ಶಂಕಿಸಿದ ಸಂದರ್ಭದಲ್ಲಿ ತಕ್ಷಣ ಯಾವ ಕ್ರಮ ಕೈಗೊಳ್ಳಬಹುದು ಎಂಬುದರ ಬಗ್ಗೆ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ, ರೈಲ್ವೆ ಸಿಬ್ಬಂದಿ ; ಆಟೋರಿಕ್ಷಾ ಚಾಲಕರು, ಸಣ್ಣಪುಟ್ಟ ಹೋಟೆಲ್‌ಗಳ ಸಿಬ್ಬಂದಿಗೆ ತರಬೇತಿ ನೀಡಿ ಅವರ ಸಹಾಯವನ್ನು ಕೋರಲಾಗಿದೆ. ಸೂಳೆಗಾರಿಕೆಗಾಗಿ ಮಕ್ಕಳ ಹೆಂಗಸರ ಅಕ್ರಮ ಸಾಗಣೆ, ಮಕ್ಕಳೊಂದಿಗೆ ಲೈಂಗಿಕ ಚಟುವಟಿಕೆಗಳು ಕಾನೂನುಬಾಹಿರ ಮತ್ತು ಶಿಕ್ಷಾರ್ಹ ಎಂಬುದು ಹಾಗೂ ಅಕಸ್ಮಾತ್ ಇಂತಹದೇನಾದರೂ ಆದಲ್ಲಿ, ಹೇಗೆ ದನಿ ಎತ್ತಬೇಕು ಮತ್ತು ಎಂತಹ ವೃತ್ತಿಪರ ಸಹಾಯ ದೊರಕುವುದು ಎಂಬುದನ್ನು ವಿವರಿಸುವ ಪ್ರಚಾರ ಸಾಮಗ್ರಿಗಳನ್ನು ಚಿಕ್ಕಪುಟ್ಟ ಜಿಲ್ಲಾ ಕೇಂದ್ರಗಳು ಹಾಗೂ ತಾಲ್ಲೂಕು/ತಹಶೀಲುಗಳಲ್ಲಿ ಹಾಕಲಾಗಿದೆ. ಎಲ್ಲೆಲ್ಲಿ ಸಾಧ್ಯವೋ ಅಲ್ಲೆಲ್ಲಾ ಕಾನೂನು ಹಾಗೂ ಶಿಸ್ತು ಪಾಲನೆ ಇಲಾಖೆ ಹಾಗೂ ನಿರೀಕ್ಷಣಾ ಗೃಹಗಳ ಸಹಾಯ ಪಡೆದು, ಕಾನೂನಿನಲ್ಲಿ ಎಲ್ಲೆಲ್ಲಿ ಅವಕಾಶವಿದೆಯೋ, ಅಲ್ಲೆಲ್ಲಾ ಜಾಗೃತ ಸಮಿತಿಗಳನ್ನು ರಚಿಸಲು ನಾವು ಪ್ರಯತ್ನಿಸುದ್ದೇವೆ. ಈ ಪ್ರಯತ್ನ ಈಗಷ್ಟೆ ಆರಂಭವಾಗಿದೆ. ಕೆಲವು ಕಡೆ, ರಾಜ್ಯ ಸಾರಿಗೆ ಸಂಸ್ಥೆ ಡಿಪೋಗಳ ನಿಯಂತ್ರಕರು ಹಾಗೂ ಆಟೋರಿಕ್ಷಾ ಚಾಲಕರ ಸಂಘದ ಮುಖಂಡರು ಮತ್ತು ಪೋಲಿಸರಿಂದ ನಮ್ಮ ಪ್ರಯತ್ನಕ್ಕೆ ಸಹಕಾರ ನೀಡುವ ಭರವಸೆ ಬಂದಿದೆ.

ಸೂಳೆಗಾರಿಕೆಯ ಬಗ್ಗೆ ಸಮಾಜದಲ್ಲಿರುವ ಭಾವನೆ, ಅನಿಸಿಕೆಗಳನ್ನು ಬದಲಿಸಲು, ಪ್ರೇರಣಾ ತೀವ್ರವಾದ ವಾದ ಮತ್ತು ಪ್ರಚಾರದ ಮೂಲಕ ಒತ್ತಡ ಹಾಕುತ್ತಿದೆ. ವಿಶ್ವಸಂಸ್ಥೆಯ ಹಲವಾರು ಸಂಸ್ಥೆಗಳು, ಯೂನಿಸೆಫ್, ಯೂನಿಫೆಮ್ ಜೊತೆಗೆ ನಿಕಟವಾಗಿ ಕೆಲಸಮಾಡುವುದೇ ಅಲ್ಲದೆ ಎಕ್‌ಪ್ಯಾಟ್, (ECPAT- ಏಷ್ಯಾ ಪ್ರವಾಸೋದ್ಯಮದಲ್ಲಿ ಮಕ್ಕಳ ಮೇಲಿನ ಸೂಳೆಗಾರಿಕೆ ಹಾಗೂ ಅಶ್ಲೀಲ ಸಾಹಿತ್ಯಕ್ಕಾಗಿ ಮಕ್ಕಳ ಬಳಕೆ ತಡೆಯಿರಿ) ಬ್ಯಾಂಕಾಕ್‌ನ ಸದಸ್ಯತ್ವವನ್ನು ಪ್ರೇರಣಾ ಹೊಂದಿದೆ. ಸರಕಾರೇತರ ಸಂಸ್ಥೆಗಳೆಲ್ಲಾ ಸೇರಿ ರಚಿಸಿಕೊಂಡಿರುವ FACS (Forum Against Child Sexual Exploitation) ನ ಸಂಯೋಜನೆಯನ್ನು ನಾವೇ ವಹಿಸಿಕೊಂಡಿದ್ದೇವೆ. ಅಕ್ರಮ ಸಾಗಣೆ, ಸೂಳೆಗಾರಿಕೆ, ಮಕ್ಕಳನ್ನು ಅಶ್ಲೀಲ ಸಾಹಿತ್ಯದಲ್ಲಿ ಬಳಸುವುದು, ಮಕ್ಕಳ ಲೈಂಗಿಕ ಶೋಷಣೆ ಮತ್ತು ಹಿಂಸೆ ವಿರುದ್ಧ ಮಾಹಿತಿ ಹಂಚಿಕೆ ಕೇಂದ್ರವೊಂದನ್ನು ನಾವು ಆರಂಭಿಸಿದ್ದೇವೆ.

ನಮ್ಮ ಕೆಲಸಗಳನ್ನು ನಿರ್ದೇಶಿಸುವ ತತ್ವಗಳು ಇವು:

- ಕೆಂಪು ದೀಪದ ಪ್ರದೇಶದ ಕೆಟ್ಟ ಹಾಗೂ ಸೂಕ್ತವಲ್ಲದ ಪ್ರದೇಶಗಳಿಂದ ಮಕ್ಕಳನ್ನು ಹೊರ ತರಬೇಕಾದರೆ ಬಹಳ ಎಚ್ಚರಿಕೆ ವಹಿಸಬೇಕು ಎಂಬುದನ್ನು ನಾವು ನಂಬುತ್ತೇವೆ. ಮಕ್ಕಳನ್ನು ತಾಯಿಂದ ಮಾನಸಿಕವಾಗಿ ಬೇರ್ಪಡಿಸಿದಂತೆ ಕಾಯ್ದುಕೊಳ್ಳಬೇಕು.

- ಕೆಂಪು ದೀಪದ ಪ್ರದೇಶದ ಹೊರಗೆ ವಸತಿ ಸಹಿತ ಸಂಸ್ಥೆ ಕಟ್ಟಿ, ಅದನ್ನು ಈ ಪ್ರದೇಶದಿಂದ ಬಂದ ಮಕ್ಕಳಿಗೆ ಮಾತ್ರ ಎಂದು ಪ್ರಕಟಿಸಿದರೆ, ತಕ್ಷಣ ಅಲ್ಲಿರುವ ಎಲ್ಲ ಮಕ್ಕಳಿಗೆ ಅಪವಾದ/ಕಳಂಕ ಅಂಟಬರುವುದೇ ಅಲ್ಲದೆ ಮಕ್ಕಳ ಗುರುತೂ ಸಹ ಬಹಿರಂಗವಾಗುವುದು.



- ಸೂಳೆಗೇರಿಗಳಲ್ಲಿ ಮಕ್ಕಳಿಗಿರುವ ಬೇಡಿಕೆಯನ್ನು ಸರ್ವಪ್ರಯತ್ನದಿಂದ ಕುಗ್ಗಿಸಬೇಕು ಎಂಬುದು ನಮ್ಮ ಖಡಾಖಂಡಿತ ನಂಬಿಕೆ. ಇದಕ್ಕಾಗಿ ಕಟ್ಟುನಿಟ್ಟಾದ ನಿಗಾ, ಮಾಹಿತಿ ಸಂಗ್ರಹ ಮತ್ತು ಅಕ್ರಮ ಸಾಗಣೆ ವಿರೋಧಿ ಕಾನೂನುಗಳ ಜಾರಿ, ತೀಕ್ಷ್ಣವಾದ ಶಿಕ್ಷೆ ಹಾಗೂ ಅಕ್ರಮ ಸಾಗಣೆಯಾದ ಪ್ರದೇಶದ ಸರ್ಕಾರಿ ನಿರ್ವಹಣಾಧಿಕಾರಿಗಳು/ ಜಾರಿ ಕಾರ್ಯಾಲಯದ ನಿಬ್ಬಂದಿಯ ಮೇಲೆ ಆ ಹೊಣೆಯನ್ನು ಹೊರಿಸಲೇಬೇಕು. ಗಿರಾಕಿಗಳು ಹಾಗೂ ಮಧ್ಯವರ್ತಿಗಳ ಮೇಲೆ ಕಾನೂನು ಕ್ರಮ ಕೈಗೊಳ್ಳಲು ಸೂಕ್ತವಾದ ತಿದ್ದುಪಡಿಗಳನ್ನು ಕಾನೂನಿನಲ್ಲಿ ಮಾಡಲೇಬೇಕು. ಪ್ರವಾಸೋದ್ಯಮದಲ್ಲಿ ಮಕ್ಕಳ ಮೇಲೆ ವ್ಯಾಪಾರೀ ಲೈಂಗಿಕ ಶೋಷಣೆ ವಿರುದ್ಧ ಕಾನೂನುಗಳನ್ನು ಜರ್ಮನಿ (ಜೂನ್ 1993) ; ಫ್ರಾನ್ಸ್ (ಫೆಬ್ರವರಿ 1994); ಆಸ್ಟ್ರೇಲಿಯಾ (ಜುಲೈ 1994) ; ಅಮೇರಿಕ (ಸಪ್ಟಂಬರ್ 1994); ಬೆಲ್ಜಿಯಂ (ಮಾರ್ಚ್ 1995) ಮತ್ತು ನ್ಯೂಜಿಲ್ಯಾಂಡ್ (ಜುಲೈ 1995) ರಲ್ಲಿ ಜಾರಿ ಮಾಡಲಾಗಿದೆ. ಇನ್ನೂ ಅನೇಕ ದೇಶಗಳು ಇಂತಹ ಕಾನೂನು ಜಾರಿಮಾಡುವತ್ತ ಯೋಚಿಸುತ್ತಿವೆ. ಪ್ರವಾಸಿ ದಲ್ಲಾಳಿಗಳು ಮಕ್ಕಳ ಹಕ್ಕುಗಳ ಒಡಂಬಡಿಕೆ, ಅದರಲ್ಲೂ ಮಕ್ಕಳ ಮೇಲಿನ ವ್ಯಾಪಾರೀ ಲೈಂಗಿಕ ಶೋಷಣೆಗೆ ಸಂಬಂಧಿಸಿದ ವಿಚಾರಗಳನ್ನು

ಗಮನಕ್ಕೆ ತೆಗೆದುಕೊಂಡು ಅವುಗಳ ನಿರ್ದೇಶನದಂತೆಯೇ ನಡೆದುಕೊಳ್ಳಬೇಕೆಂದು ಇಟಾಲಿಯನ್ ಸರ್ಕಾರ (ಮಾರ್ಚ್ 1995) ಆಜ್ಞೆ ನೀಡಿದೆ.

- ಈ ಕಷ್ಟಕ್ಕೆ ದೂಡಲ್ಪಡುವವರು ಬರುವುದು ಗ್ರಾಮೀಣ ಪ್ರದೇಶಗಳಿಂದಲೇ ಹೆಚ್ಚಿರುವ ಕಾರಣ, ನಮ್ಮ ಹಿಂದಿನ ಗ್ರಾಮೀಣ ಜ್ಞಾನ ತಿಳಿವಳಿಕೆಯನ್ನು ಗಟ್ಟಿಗೊಳಿಸಬೇಕಿದೆ. ಅವು, ಗ್ರಾಮೀಣ ಆರ್ಥಿಕ ಪರಿಸ್ಥಿತಿಯ ಉತ್ತಮಿಕೆ, ಸಮುದಾಯ ಮತ್ತು ಕೌಟುಂಬಿಕ ವ್ಯವಸ್ಥೆಗಳು ಮುರಿದು ಬೀಳದಂತೆ ಎಚ್ಚರವಹಿಸುವುದು, ಮಣ್ಣು ಮತ್ತು ನೀರಿನ ಸವಕಳಿ ತಡೆಯುವುದು, ಪರಿಸರ ಸಂರಕ್ಷಣೆ, ಗ್ರಾಮೀಣ ಸ್ವಯಂ ನಿರ್ವಹಣೆ, ಭೂಸುಧಾರಣೆ ತರುವುದು, ಸಾಮಾಜಿಕ ನಿರ್ಮಾಣಗಳ ಜಾರಿ, ಶಿಕ್ಷಣವನ್ನು ಕಡ್ಡಾಯಗೊಳಿಸುವುದು (ಇದರ ಜವಾಬ್ದಾರಿ ಪೂರ್ಣವಾಗಿ ಪೋಷಕರ ಮೇಲಲ್ಲ, ಆದರೆ ಹೆಚ್ಚಾಗಿ ಸರ್ಕಾರದ ಮೇಲೆ), ಉಳಿವಿವಾಗಿ ಅಥವಾ ಋತುಮಾನಗಳಿಗನುಗುಣವಾಗಿ ವಲಸೆ ಹೋಗುವುದನ್ನು ತಡೆಯುವುದು, ಬದುಕಲು ಬೇಕಾದ ಸಂಪನ್ಮೂಲಗಳ ಸಮಾನ ಹಂಚಿಕೆ, ಉಳಿದು ಬೆಳೆಯಲು ಬೇಕಾದ ಸ್ವಾಭಾವಿಕ ಜೀವನಾಧಾರಗಳಿಗೆ ಎಲ್ಲರಿಗೂ ಹಕ್ಕು, ಸೂಕ್ತ ತಂತ್ರ ಜ್ಞಾನಗಳಿಗೆ ಪ್ರಚಾರ ಮತ್ತು ಅಳವಡಿಕೆ, ವಿಕೇಂದ್ರೀಕೃತ ಪ್ರಜಾಪ್ರಭುತ್ವ ಪ್ರಕ್ರಿಯೆಯನ್ನು ನಿಜಗೊಳಿಸುವುದು ಮತ್ತು ಸಮಾಜದಲ್ಲಿ ಹೆಂಗಸರು ಮತ್ತು ಮಕ್ಕಳ ಸ್ಥಾನಮಾನವನ್ನು ಉನ್ನತಗೊಳಿಸಬೇಕು.

- ಸಮಾಜದ ನೈತಿಕ ಮಟ್ಟವನ್ನು ಬೆಳಸುವುದು ಇಂದಿನ ತುರ್ತು. ತೀರ್ವವಾದ ವೇಗದಲ್ಲಿ ಬೆಳೆಯುತ್ತಿರುವ ಮಾರುಕಟ್ಟೆಯ ಪ್ರಭಾವ ಮಾನವರ ಜೀವನವನ್ನೂ ಸಹ ಒಂದು ಮಾರಾಟದ ವಸ್ತುವನ್ನಾಗಿಸಿ, ಸಂಪತ್ತಿನ ಅಸಮ ಪಾಲು ಹೆಚ್ಚಾಗುತ್ತಿದ್ದಂತೆಯೇ ಅದು ಜೀತಕ್ಕೆ ಮತ್ತು ಮಾನವರನ್ನೂ ತೀರ್ವತರವಾದ ಶೋಷಣೆಗೆ ಗುರಿಮಾಡುತ್ತಿದೆ. ಜೀವನ ಮೌಲ್ಯಗಳು ಮತ್ತು ಸಂಸ್ಕೃತಿಯನ್ನು ಕೇವಲವಾಗಿ ಪರಿಗಣಿಸಲಾಗದು. ಇವುಗಳನ್ನು ಸತತವಾಗಿ ಉತ್ತಮವಾದ ಉದಾಹರಣೆಗಳ ಮೂಲಕ ತಿಳಿಸುತ್ತಲೇ ಇರಬೇಕು.

- ಸದಾ ಸೋಲೇ ಕಾಣುತ್ತಿರುವ ರಾಜಕೀಯ ಅನ್ವೇಷಣೆಗಳು, ಪ್ರಯೋಗಗಳಿಂದ ಬೇಸತ್ತ ಜನ ಸರ್ವಾಧಿಕಾರಕ್ಕೆ, ಮೂಲಭೂತವಾದಕ್ಕೆ ಅಥವಾ ತತ್ವವೇ ಇಲ್ಲದ ಗುಂಪು ಮನೋಭಾವಗಳಿಗೆ ಬಲಿಯಾಗುವ ಸಾಧ್ಯತೆಯಿದೆ. ಸಂಪ್ರದಾಯಿಕ ವ್ಯವಸ್ಥೆಗಳು, ಸಾಮಾಜಿಕ ರಚನೆಗಳು ಹಾಗೂ ನಂಬಿಕೆಗಳಲ್ಲಿ ಬೇರುಬಿಟ್ಟಿರುವ ಅನ್ಯಾಯಕ್ಕಾಗಿ ಟೀಕಿಸುವುದು ತಪ್ಪೇನಲ್ಲ, ಆದರೆ ಅವುಗಳನ್ನು ಗಂಟುಕಟ್ಟಿ ಬಿಸಾಡುವ ಮೊದಲು ಸಾಕಷ್ಟು ಎಚ್ಚರಿಕೆ ವಹಿಸಬೇಕು.

- ಮನೆಯೊಳಗೇ ಕೂಡಾ ಮಕ್ಕಳ ದುರುಪಯೋಗವಾಗುತ್ತಿದ್ದರೆ ಅವನ್ನು ಮುಚ್ಚಿಡಲಾಗದು. ಕೌಟುಂಬಿಕ ವ್ಯವಸ್ಥೆಗೆ ಯಾವುದೇ ಧಕ್ಕೆ ಬಾರದಂತೆ, ಇಂತಹ ವಿಚಾರಗಳನ್ನು ಬಹಿರಂಗವಾಗಿ ಖಂಡಿಸುವ ಅವಶ್ಯವಿದೆ. ಕೈಗಾರಿಕಾ ಕ್ರಾಂತಿಯ ನಂತರ ಸಮಾಜದಲ್ಲಿ ಕೌಟುಂಬಿಕ ವ್ಯವಸ್ಥೆಯು ಕುಸಿದು ಬಿದ್ದ ಕಾರಣ ಮಕ್ಕಳ ದುರುಪಯೋಗ ಹೆಚ್ಚಾಗಿದೆ. ಮಗುವೆಂದರೆ ಶಕ್ತಿರಹಿತ, ಅವಲಂಬಿತ ಹಾಗೂ ಮುಗ್ಧ. ಪ್ರಕೃತಿಯು ಅನರ್ಘ್ಯ ರತ್ನವನ್ನು ಸಮಾಜದಲ್ಲಿ ಬೆಳೆದವರ ಕೈಗೊಪ್ಪಿಸಿರುವುದು. ಮಕ್ಕಳ ಆ ಮುಗ್ಧತೆಯನ್ನು ರಕ್ಷಿಸುವ ಸಂಪೂರ್ಣ ಜವಾಬ್ದಾರಿ ಬೆಳದವರದ್ದು. ಮಕ್ಕಳ ವ್ಯಾಪಾರೀ ಲೈಂಗಿಕ ದುರುಪಯೋಗ ಅಥವಾ ಯಾವುದೇ ರೀತಿಯ ದುರುಪಯೋಗವನ್ನು ನಿರ್ಮೂಲ ಮಾಡಲು ತುರ್ತಾಗಿ ಕ್ರಮ ಕೈಗೊಳ್ಳಬೇಕು.

*ಪ್ರೀತಿ ಪಾಟ್ಕರ್, ಮುಂಬಯಿಯಲ್ಲಿ ವ್ಯಾಪಾರೀ ಲೈಂಗಿಕ ಕೆಲಸಗಾರರ ಮಕ್ಕಳೊಡನೆ ಕೆಲಸ ಮಾಡುತ್ತಿರುವ ಪ್ರೇರಣಾ, ಸರ್ಕಾರೇತರ ಸಂಸ್ಥೆಯ ಸಂಸ್ಥಾಪಕ ನಿರ್ದೇಶಕಿ. ಪ್ರವೀಣ್ ಪಾಟ್ಕರ್, ಟಾಟಾ ಇನ್‌ಸ್ಟಿಟ್ಯೂಟ್ ಆಫ್ ಸೋಷಿಯಲ್ ಸೈನ್ಸ್ (TISS) ನಲ್ಲಿ ಪ್ರಾಧ್ಯಾಪಕರಾಗಿ ಕೆಲಸ ಮಾಡಿದ್ದವರು. ಅವರೂ ಸಹ ಪ್ರೇರಣಾದ ಸ್ಥಾಪಕ ನಿರ್ದೇಶಕರು.*

*ಅನುವಾದ : ವಾಸುದೇವ ಶರ್ಮಾ*

## ವಿಶ್ವ ಸಂಸ್ಥೆಯು ಘೋಷಿಸಿರುವ

# ಮಕ್ಕಳ ಹಕ್ಕುಗಳ ಒಡಂಬಡಿಕೆ

## (ಯೂನಿಸೆಫ್‌ನವರ ಅನಧಿಕೃತ ಸಾರ ಸಂಗ್ರಹ)

**ಮಗು ಎಂಬುದರ ವ್ಯಾಖ್ಯಾನ**

18 ವರ್ಷದೊಳಗಿನ ವ್ಯಕ್ತಿಯನ್ನು ಮಗು ಎಂದು ಗುರುತಿಸಲಾಗಿದೆ. ರಾಷ್ಟ್ರೀಯ ಕಾನೂನುಗಳು 18 ವರ್ಷದೊಳಗೆ ಪ್ರೌಢತೆ ಬಂದಿದೆ ಎಂದು ಗುರುತಿಸಿಲ್ಲದಿದ್ದರೆ ಇದು ಜಾರಿಯಾಗಬೇಕು.

**ತಾರತಮ್ಯವಿರಬಾರದು**

ಈ ಎಲ್ಲ ಹಕ್ಕುಗಳು ಯಾವ ಮಗುವನ್ನೂ ಹೊರತುಪಡಿಸದೆ ಜಾರಿ ಇದೆ. ಯಾವುದೇ ತಾರತಮ್ಯ ಯಾವುದೇ ಮಗುವನ್ನು ಭಾಧಿಸದಂತೆ ಮಕ್ಕಳನ್ನು ರಕ್ಷಿಸಿ, ಮಕ್ಕಳ ಹಕ್ಕುಗಳನ್ನು ಎತ್ತಿಹಿಡಿಯಲು ಗುಣಾತ್ಮಕ ಕ್ರಮಕೈಗೊಳ್ಳುವುದು ಸರ್ಕಾರದ ಜವಾಬ್ದಾರಿ.

**ಮಗುವಿನ ಹಿತದೃಷ್ಟಿ**

ಮಕ್ಕಳಿಗಾಗಿ ಯಾವುದೇ ಕ್ರಮ ಕೈಗೊಂಡರೂ ಅದು ಆಯಾ ಮಗುವಿನ ಹಿತಾಸಕ್ತಿಯನ್ನು ಸಂಪೂರ್ಣವಾಗಿ ಗಮನಕ್ಕೆ ತೆಗೆದುಕೊಳ್ಳಬೇಕು. ತಂದೆ ತಾಯಿ, ಪೋಷಕರು, ಅಥವಾ ಮಗುವಿನ ಲಾಲನೆ ಪಾಲನೆ ಕೈಗೊಳ್ಳಬೇಕಾದವರು ದೂರವಾದರೆ ಅಂತಹ ಮಕ್ಕಳ ರಕ್ಷಣೆಗಾಗಿ ಸರ್ಕಾರ ಸೂಕ್ತಕ್ರಮಕೈಗೊಳ್ಳಬೇಕು.

**ಹಕ್ಕುಗಳ ಜಾರಿ**

ಒಡಂಬಡಿಕೆಯಲ್ಲಿ ಇರುವ ಹಕ್ಕುಗಳ ಜಾರಿಗಾಗಿ ಸರ್ಕಾರ ಎಲ್ಲ ಪ್ರಯತ್ನಗಳನ್ನು ಮಾಡಬೇಕು.

**ಪೋಷಕರ ಸಲಹೆ ಮತ್ತು ಮಕ್ಕಳ ಸಾಮರ್ಥ್ಯಗಳ ಬೆಳವಣಿಗೆ**

ಮಕ್ಕಳ ಸಾಮರ್ಥ್ಯಗಳು ವಿಕಾಸವಾಗಲು ಸೂಕ್ತವಾದ ಸಹಾಯ ಸಲಹೆಗಳನ್ನು ಪೋಷಕರು ಹಾಗೂ ಹತ್ತಿರದ ಸಂಬಂಧಿಗಳು ನೀಡುವ ಹಕ್ಕು ಹಾಗೂ ಜವಾಬ್ದಾರಿಗಳಿಗೆ ಸರ್ಕಾರವು ಮನ್ನಣೆ ನೀಡಬೇಕು.

**ಉಳಿವು ಮತ್ತು ಅಭಿವೃದ್ಧಿ**

ಪ್ರತಿ ಮಗುವಿಗೆ ಸಾಯದೆ ಬದುಕುಳಿಯುವ ಹಕ್ಕು ಇದೆ. ಮಕ್ಕಳು ಉಳಿದು ಅಭಿವೃದ್ಧಿ ಹೊಂದುವುದನ್ನು ಖಾತರಿಪಡಿಸುವುದು ಸರ್ಕಾರದ ಕರ್ತವ್ಯ.




**ಹೆಸರು ಮತ್ತು ರಾಷ್ಟ್ರೀಯತೆ**

ಹುಟ್ಟಿದ ಕೂಡಲೆ ಒಂದು ಹೆಸರನ್ನು ಹೊಂದುವುದು ಮಗುವಿನ ಹಕ್ಕು. ಒಂದು ರಾಷ್ಟ್ರೀಯತೆ ಹೊಂದಿರುವ ಹಾಗೂ ಸಾಧ್ಯವಿರುವ ಕಡೆ ತನ್ನ ತಂದೆ ತಾಯಿಯರಾರು ಎಂದು ತಿಳಿಯುವ ಹಾಗೂ ಅವರಿಂದ ಪಾಲನೆ ಪೋಷಣೆ ಪಡೆಯುವ ಹಕ್ಕು ಕೂಡಾ ಮಕ್ಕಳಿಗಿದೆ.

**ಅನನ್ಯತೆಗೆ ಭಂಗಬಾರದಿರುವುದು**

ಮಕ್ಕಳ ಗುರುತು/ಅನನ್ಯತೆಗೆ ಭಂಗ ಬಾರದಂತೆ ರಕ್ಷಿಸುವುದು ಹಾಗೂ ಅವಶ್ಯಕತೆ ಇದ್ದರೆ ಅಂತಹ ಅನನ್ಯತೆಯನ್ನು

ಮರುಸ್ಥಾಪಿಸುವುದು ಸರ್ಕಾರದ ಕರ್ತವ್ಯ. ಹೆಸರು, ಕೌಟುಂಬಿಕ ಸಂಬಂಧಗಳು ಹಾಗೂ ರಾಷ್ಟ್ರೀಯತೆಯನ್ನು ಇದು ಹೊಂದಿದೆ.

**ಹೆತ್ತವರಿಂದ ದೂರವಾಗದಿರುವುದು**

ಮಗುವಿನ ಹಿತದೃಷ್ಟಿಯಿಂದ ಹೆತ್ತವರೊಡನಿರುವುದು ಸೂಕ್ತವಲ್ಲ ಎಂದು ತೀರ್ಮಾನವಾಗದಿದ್ದಲ್ಲಿ, ತನ್ನ ಹೆತ್ತವರೊಡನಿರುವುದು ಮಗುವಿನ ಹಕ್ಕು. ಅಕಸ್ಮಾತ್ ಯಾರಾದರೊಬ್ಬರು ಅಥವಾ ಇಬ್ಬರಿಂದಲೂ ಮಗು ಬೇರ್ಪಡುವುದು ಅನಿವಾರ್ಯವಾದರೆ, ಅವರೊಡನೆ ಸಂಪರ್ಕವಿಟ್ಟುಕೊಂಡಿರುವುದು ಮಗುವಿನ ಹಕ್ಕು.

**ಕೌಟುಂಬಿಕ ಪುನರ್ಮಿಲನ**

ಕುಟುಂಬದೊಡನೆ ಸೇರಲು ಅಥವಾ ಮಗು ಹಾಗೂ ಹೆತ್ತವರೊಡನೆ ಸಂಬಂಧ ಮರು ಸ್ಥಾಪಿಸಲು ಮಕ್ಕಳು ಹಾಗೂ ಹೆತ್ತವರು ಯಾವುದೇ ದೇಶವನ್ನು ತೊರೆಯುವ ಹಾಗೂ ಪ್ರವೇಶಿಸುವ ಹಕ್ಕು ಹೊಂದಿದ್ದಾರೆ.

**ಕಾನೂನು ಬಾಹಿರ ಸಾಗಣೆ**

ಮಕ್ಕಳನ್ನು ಕಾನೂನಿಗೆ ವಿರುದ್ಧವಾಗಿ, ಕದ್ದೊಯ್ಯುವ, ಸಾಗಿಸಿ ಹಿಡಿದಿಟ್ಟುಕೊಳ್ಳುವುದರ ವಿರುದ್ಧ ಸರ್ಕಾರ ಕ್ರಮಕೈಗೊಳ್ಳಬೇಕು.

**ಮಕ್ಕಳ ಅಭಿಪ್ರಾಯ**

ಮಗುವಿನ ಮೇಲೆ ಪ್ರಭಾವ ಬೀರಬಹುದಾದ ಯಾವುದೇ ವಿಚಾರ ಅಥವಾ ಕ್ರಮಗಳ ಮೇಲೆ ತನ್ನ ಅಭಿಪ್ರಾಯ ವ್ಯಕ್ತಪಡಿಸುವ ಹಾಗೂ ಆ ಅಭಿಪ್ರಾಯವನ್ನು ಗಣನೆಗೆ ತೆಗೆದುಕೊಳ್ಳಬೇಕೆಂದು ಆಗ್ರಹಿಸುವ ಹಕ್ಕು ಮಕ್ಕಳಿಗಿದೆ.

**ಅಭಿವ್ಯಕ್ತಿ ಸ್ವಾತಂತ್ರ್ಯ**

ಮಕ್ಕಳಿಗೆ ತಮ್ಮ ಅಭಿಪ್ರಾಯ ವ್ಯಕ್ತಪಡಿಸುವ ಹಕ್ಕು ಇದೆ. ಯಾವುದೇ ದೇಶಭಾಷೆಗಳ ಗಡಿಗಳಿಲ್ಲದೆ ಮಾಹಿತಿ ಪಡೆಯುವ, ವಿಚಾರ ತಿಳಿಯುವ ಹಕ್ಕು ಮಕ್ಕಳಿಗಿದೆ.

**ವಿಚಾರಮಾಡುವ, ಆತ್ಮ ಸಾಕ್ಷಿಯಮತೆ ನಡೆಯುವ, ಧಾರ್ಮಿಕ ಸ್ವಾತಂತ್ರ್ಯ.**

ಪೋಷಕರ ಸೂಕ್ತ ಸಲಹೆಯಡಿ ಮಗುವಿಗೆ ವಿಚಾರ ಮಾಡುವ, ಆತ್ಮ ಸಾಕ್ಷಿಯಂತೆ ನಡೆಯುವ ಹಾಗೂ ಧಾರ್ಮಿಕ ಹಕ್ಕುಗಳನ್ನು ಸರ್ಕಾರ ಗೌರವಿಸಬೇಕು.

**ಸಂಘಟಿತರಾಗಿರುವ ಹಕ್ಕು**

ಮಕ್ಕಳಿಗೆ ಇತರರೊಡನೆ ಸೇರುವ, ಭೇಟಿ ಮಾಡುವ ಹಾಗೂ ಸಂಘಟಿತರಾಗಿರುವ ಹಕ್ಕು ಇದೆ.

**ಖಾಸಗೀತನದ ರಕ್ಷಣೆ**

ಮಕ್ಕಳ ಯಾವುದೇ ರೀತಿಯ ಖಾಸಗೀತನಕ್ಕೆ -ಕೌಟುಂಬಿಕ, ಗೃಹ, ಪತ್ರ, ವ್ಯವಹಾರಗಳಲ್ಲಿ ಯಾರೂ ತಲೆಹಾಕದಂತೆ ಹಾಗೂ ಆರೋಪಗಳು ಬಾರದಂತೆ ರಕ್ಷಿಸಿಕೊಳ್ಳುವ ಹಕ್ಕು ಮಕ್ಕಳಿಗಿದೆ.

**ಸೂಕ್ತ ಮಾಹಿತಿಯ ಲಭ್ಯತೆ**

ವಿವಿಧ ಮೂಲಗಳಿಂದ ಮಾಹಿತಿ ಸಾಮಗ್ರಿಗಳನ್ನು ಹೊಂದುವ ಹಕ್ಕನ್ನು ಮಕ್ಕಳಿಗೆ ಸರ್ಕಾರ ಒದಗಿಸಬೇಕು. ಸಾಮಾಜಿಕ ಹಾಗೂ ಸಾಂಸ್ಕೃತಿಕವಾಗಿ ಮಕ್ಕಳಿಗೆ ಉಪಯುಕ್ತವಾದ ಮಾಹಿತಿಯನ್ನು ಪಸರಿಸಲು ಮಾಧ್ಯಮಗಳನ್ನು ಸರ್ಕಾರ ಪ್ರೋತ್ಸಾಹಿಸಿ, ಮಕ್ಕಳಿಗೆ ಹಾನಿಕಾರಕ ಮಾಹಿತಿಗಳು ತಲುಪದಂತೆ ಎಚ್ಚರಿಕೆ ವಹಿಸಬೇಕು.

**ಪೋಷಕರ ಜವಾಬ್ದಾರಿ**

ತಂದೆ ತಾಯಿಯರಿಗೆ ತಮ್ಮ ಮಕ್ಕಳ ಪಾಲನೆಯು ಪ್ರಾಥಮಿಕ ಜವಾಬ್ದಾರಿಯಾಗಿದ್ದು ಸರ್ಕಾರ ಅದನ್ನು ಬೆಂಬಲಿಸಬೇಕು. ಮಕ್ಕಳ ಆರೈಕೆ, ಬೆಳವಣಿಗೆಗೆ ಸೂಕ್ತವಾದ ಸಹಾಯವನ್ನು ಸರ್ಕಾರ ಮಾಡಿಕೊಡಬೇಕು.

**ದುರುಪಯೋಗ ಮತ್ತು ನಿರ್ಲಕ್ಷ್ಯದಿಂದ ರಕ್ಷಣೆ**

ಮಕ್ಕಳ ಪಾಲನೆಯ ಜವಾಬ್ದಾರಿ ಹೊಂದಿರುವ ಪೋಷಕರೇ ಮೊದಲಾದವರು ಮಕ್ಕಳ ದುರುಪಯೋಗ ಮಾಡುತ್ತಿದ್ದಲ್ಲಿ, ಮಕ್ಕಳನ್ನು ರಕ್ಷಿಸುವ, ಮಕ್ಕಳ ದುರುಪಯೋಗ ಪಡೆದು, ಹಾಗೆ ಬಲಿಯಾಗಿದ್ದ ಮಕ್ಕಳ ಪುನರ್ವಸತಿಗಾಗಿ ಸೂಕ್ತ ಸಾಮಾಜಿಕ ಕಾರ್ಯಕ್ರಮ ರೂಪಿಸುವುದೂ ಸಹ ಸರ್ಕಾರದ ಜವಾಬ್ದಾರಿ.

**ಕುಟುಂಬವಿಲ್ಲದ ಮಕ್ಕಳ ರಕ್ಷಣೆ**

ಕೌಟುಂಬಿಕ ವಾತಾವರಣದಿಂದ ಹೊರಬಿದ್ದ ಮಗುವಿಗೆ ವಿಶೇಷ ರಕ್ಷಣೆ ಒದಗಿಸುವುದು ಸರ್ಕಾರದ ಜವಾಬ್ದಾರಿ. ಪರ್ಯಾಯ ಕೌಟುಂಬಿಕ ವ್ಯವಸ್ಥೆ ಅಥವಾ ಸಂಸ್ಥೆಗಳಲ್ಲಿ ಪುನರ್ವಸತಿ ಮಾಡುವಾಗ ಮಗುವಿನ ಸಾಮಾಜಿಕ, ಸಾಂಸ್ಕೃತಿಕ ಹಿನ್ನೆಲೆಗೆ ಸೂಕ್ತ ಮನ್ನಣೆ ನೀಡಬೇಕು.

**ದತ್ತು**

ಮಕ್ಕಳಿಗೆ ಪರ್ಯಾಯ ಕೌಟುಂಬಿಕ ವ್ಯವಸ್ಥೆ ಮಾಡುವಾಗ ಮಗುವಿನ ಹಿತದೃಷ್ಟಿಯಿಂದ ದತ್ತು ನೀಡಬೇಕು. ಈ ಪ್ರಕ್ರಿಯೆಯನ್ನು ಸೂಕ್ತ ಕಾನೂನು, ನ್ಯಾಯಿಕ ವಿಧಾನಗಳಲ್ಲೇ ನಡೆಸಬೇಕು.

**ನಿರಾಶ್ರಿತ ಮಕ್ಕಳು**

ನಿರಾಶ್ರಿತ ಮಕ್ಕಳು ಮತ್ತು ನಿರಾಶ್ರಿತರ ಸ್ಥಾನಮಾನ ಬೇಡಿ ಬರುವ ಮಕ್ಕಳಿಗೆ ವಿಶೇಷ ರಕ್ಷಣೆಯನ್ನು ನೀಡಬೇಕು. ಇಂತಹ ಮಕ್ಕಳಿಗೆ ರಕ್ಷಣೆ, ಸಹಾಯ ನೀಡುವ ಸಂಬಂಧ ಪಟ್ಟ ಇಲಾಖೆ, ಸಂಸ್ಥೆಗೆ ಸರ್ಕಾರ ವಿಶೇಷವಾದ ಸಹಕಾರ ನೀಡಬೇಕು.

**ಅಂಗವಿಕಲ ಮಕ್ಕಳು**

ಯಾವುದೇ ರೀತಿಯ ಅಂಗ ವಿಕಲತೆ ಇದ್ದರೂ ತಮ್ಮ ಜೀವನವನ್ನು ಸಂಪೂರ್ಣವಾಗಿ ಸ್ವಂತವಾಗಿ ಅನುಭವಿಸಲು, ಗೌರವಯುತ ಬಾಳ್ವೆ ನಡೆಸಿ ಸಮಾಜದ ಮುಖ್ಯವಾಹಿನಿಯಲ್ಲಿ ಬೆರೆತು ಮುಂದೆ ಬರಲು ನೆರವಾಗುವಂತಹ ವಿಶೇಷ ರಕ್ಷಣೆ, ಶಿಕ್ಷಣ ಹಾಗೂ ತರಬೇತಿ ಪಡೆಯುವುದು ಮಕ್ಕಳ ಹಕ್ಕು.

**ಆರೋಗ್ಯ ಮತ್ತು ಆರೋಗ್ಯ ಸೇವೆಗಳು**

ಅತ್ಯುನ್ನತವಾದ ಆರೋಗ್ಯ ಮಟ್ಟವನ್ನು ಕಾಪಾಡಿಕೊಳ್ಳಲು ಬೇಕಾದ ಉತ್ತಮ ಆರೋಗ್ಯ ಸೇವೆ ಪಡೆಯುವುದು ಮಕ್ಕಳ ಹಕ್ಕು. ಪ್ರಾಥಮಿಕ ಆರೋಗ್ಯ ಹಾಗೂ ರೋಗ ಹರಡುವಿಕೆ ತಡೆ, ಆರೋಗ್ಯ ಸೇವೆ ಮತ್ತು ಆರೋಗ್ಯ ಶಿಕ್ಷಣ ನೀಡಲು ಮತ್ತು ಶಿಶುಮರಣ ತಗ್ಗಿಸಲು ಸರ್ಕಾರ ಗಣನೀಯವಾದ ಕ್ರಮ ಕೈಗೊಳ್ಳಬೇಕು. ಇದಕ್ಕಾಗಿ ಅಂತಾರಾಷ್ಟ್ರೀಯ ಸಂಹಯೋಗಗಳನ್ನು ಪ್ರೇರೇಪಿಸುವುದೇ ಅಲ್ಲದೆ, ಯಾವುದೇ ಮಗು ಪರಿಣಾಮಕಾರಿ ಆರೋಗ್ಯ ಸೇವೆಯಿಂದ ವಂಚಿತವಾಗದಂತೆ ನೋಡಿಕೊಳ್ಳಬೇಕು.

**ನಿಯಮಿತ ಅವಧಿಗಳಲ್ಲಿ ಪುನರ್ವಿಮರ್ಷೆ**

ರಕ್ಷಣೆ, ಆರೈಕೆ ಅಥವಾ ಚಿಕಿತ್ಸೆಗಾಗಿ ಸರ್ಕಾರವು ಮಕ್ಕಳನ್ನು ನಿಗಧಿ ಪಡಿಸಿದ ಸ್ಥಳದಲ್ಲಿ ಇರಿಸಿದಾಗ, ಮಗುವಿನ ಆರೈಕೆ, ಚಿಕಿತ್ಸೆಯ ಪ್ರಗತಿ ಕುರಿತು ನಿಯಮಿತ ಕಾಲಾವಧಿಗಳಲ್ಲಿ ಪರಾಮರ್ಶೆ ಮಾಡಬೇಕು.

**ಸಾಮಾಜಿಕ ಭದ್ರತೆ**

ಸಾಮಾಜಿಕ ಭದ್ರತೆ ಮತ್ತು ಸಾಮಾಜಿಕ ವಿಮೆಯ ಸಂಪೂರ್ಣ ಫಲ ಪಡೆಯುವುದು ಮಕ್ಕಳ ಹಕ್ಕು.

**ಜೀವನ ಮಟ್ಟ**

ತಮ್ಮ ದೈಹಿಕ, ಮಾನಸಿಕ, ಧಾರ್ಮಿಕ, ನೈತಿಕ ಹಾಗೂ ಸಾಮಾಜಿಕ ಅಭಿವೃದ್ಧಿಗೆ ಸೂಕ್ತವಾದ ಜೀವನ ಮಟ್ಟವನ್ನು ಹೊಂದುವುದು ಮಕ್ಕಳ ಹಕ್ಕು. ತಮ್ಮ ಸಾಮರ್ಥ್ಯದ ಮಿತಿಯೊಳಗೆ ಇವನ್ನು ಮಕ್ಕಳಿಗೆ ಒದಗಿಸುವುದು ಪೋಷಕರ ಕರ್ತವ್ಯ. ಮಕ್ಕಳಿಗೆ ಅತ್ಯಗತ್ಯವಾದುದನ್ನು ಒದಗಿಸುವುದಕ್ಕೆ ಸಹಾಯ ಮಾಡುವುದು ಸರ್ಕಾರದ ಕರ್ತವ್ಯ. ಪೋಷಕರಿಗೆ ಹಾಗೂ ಮಕ್ಕಳಿಗೆ ಅತ್ಯಗತ್ಯವಾದ ಸೇವೆ, ಆಹಾರ, ಬಟ್ಟೆ, ವಸತಿ ದೊರಕಿಸಲು ಸರ್ಕಾರ ಪ್ರಯತ್ನಿಸಬೇಕು.

**ಶಿಕ್ಷಣ**

ಮಕ್ಕಳಿಗೆ ಶಿಕ್ಷಣದ ಹಕ್ಕು ಇದೆ. ಉಚಿತ ಹಾಗೂ ಕಡ್ಡಾಯ ಪ್ರಾಥಮಿಕ ಶಿಕ್ಷಣ ಎಲ್ಲರಿಗೂ ದೊರೆಯಲು ಹಾಗೂ ಪ್ರತಿ ಮಗುವಿಗೂ ವಿವಿಧ ರೀತಿಯ ಪ್ರೌಢಶಾಲಾ ಶಿಕ್ಷಣ ಹಾಗೂ ಉನ್ನತ ಶಿಕ್ಷಣವು ಎಟಕುವಂತೆ ಏರ್ಪಡಿಸುವುದು ಸರ್ಕಾರದ ಕರ್ತವ್ಯ. ಶಾಲೆಯ ಶಿಸ್ತು ಮಕ್ಕಳ ಘನತೆ, ಗೌರವ, ಹಕ್ಕುಗಳಿಗೆ ವ್ಯತ್ಯಯವಾಗುವಂತಿರಬಾರದು. ಈ ಹಕ್ಕನ್ನು ಜಾರಿ ಮಾಡಲು ಅಂತಾರಾಷ್ಟ್ರೀಯ ಸಹಕಾರವನ್ನು ಸಹ ಸರ್ಕಾರಗಳು ಪಡೆಯಬಹುದು.

**ಶಿಕ್ಷಣದ ಗುರಿ**

ಮಕ್ಕಳ ವ್ಯಕ್ತಿತ್ವ, ಪ್ರತಿಭೆ ಮತ್ತು ಮಾನಸಿಕ, ದೈಹಿಕ ಸಾಮರ್ಥ್ಯಗಳು ಸಂಪೂರ್ಣವಾಗಿ ವಿಕಾಸ ಹೊಂದಲು ಶಿಕ್ಷಣವು ನೆರವಾಗಬೇಕು. ಬೆಳೆದಂತೆ ಮುಕ್ತ ಸಮಾಜದಲ್ಲಿ ಜೀವಿಸುವ, ಪೋಷಕರು, ತನ್ನ ಸಾಂಸ್ಕೃತಿಕ ಗುರುತು, ಭಾಷೆ, ಮೌಲ್ಯಗಳಲ್ಲದೆ ಇತರರ ಸಂಸ್ಕೃತಿ, ಮೌಲ್ಯಗಳನ್ನು ಗೌರವಿಸಲು ಸಿದ್ಧಮಾಡುವಂತಹ ಶಿಕ್ಷಣವನ್ನು ಮಕ್ಕಳಿಗೆ ನೀಡಬೇಕು.

**ಮೂಲನಿವಾಸಿಗಳು ಹಾಗೂ ಅಲ್ಪಸಂಖ್ಯಾತರ ಮಕ್ಕಳು**

ಮೂಲನಿವಾಸಿಗಳು ಹಾಗೂ ಅಲ್ಪ ಸಂಖ್ಯಾತರ ಮಕ್ಕಳಿಗೆ ತಮ್ಮ ಸಂಸ್ಕೃತಿ, ಧರ್ಮವನ್ನು ನಡೆಸಿಕೊಳ್ಳುವ ಮತ್ತು ಭಾಷೆಯನ್ನು ಬಳಸುವ ಹಕ್ಕು ಇದೆ.

**ವಿರಾಮ, ವಿಶ್ರಾಂತಿ, ಮನೋರಂಜನೆ ಮತ್ತು ಸಾಂಸ್ಕೃತಿಕ ಚಟವಟಿಕೆಗಳು**

ವಿರಾಮ, ವಿಶ್ರಾಂತಿ ಹೊಂದುವುದು, ಆಟ, ಮನೋರಂಜನಾತ್ಮಕ, ಸೃಜನಶೀಲ ಹಾಗೂ ಸಾಂಸ್ಕೃತಿಕ ಚಟವಟಿಕೆಗಳಲ್ಲಿ ಭಾಗವಹಿಸುವುದು ಮಕ್ಕಳ ಹಕ್ಕು.

**ಬಾಲ ಕಾರ್ಮಿಕರು**

ತನ್ನ ಆರೋಗ್ಯ, ಶಿಕ್ಷಣ ಹಾಗೂ ಅಭಿವೃದ್ಧಿಗೆ ಮಾರಕವಾಗುವಂತಹ ಎಂತಹದೇ ಕೆಲಸದಲ್ಲಿ ತೊಡಗುವುದರ ವಿರುದ್ಧ ಮಕ್ಕಳಿಗೆ ಹಕ್ಕು ಇದೆ. ಕೆಲಸಕ್ಕೆ ಸೇರಲು ಕನಿಷ್ಟ ವಯೋಮಿತಿಯನ್ನು ಸೂಚಿಸುವುದೇ ಅಲ್ಲದೆ ಕೆಲಸದ ಅವಧಿಯನ್ನು ಸಹ ಸರ್ಕಾರ ನಿಯಂತ್ರಿಸಬೇಕು.

**ಮಾದಕ ದ್ರವ್ಯಗಳ ದುರುಪಯೋಗ**

ಯಾವುದೇ ರೀತಿಯ ಮಾದಕ ವಸ್ತುಗಳು ಹಾಗೂ ಭ್ರಾಮಕ ವಸ್ತುಗಳ ವಶವಾಗುವುದು ಹಾಗೂ ಅವುಗಳ ತಯ್ಯಾರಿ ಮತ್ತು ಸಾಗಣೆಗೆ ಗುರಿಯಾಗುವುದರ ವಿರುದ್ಧ ಮಕ್ಕಳಿಗೆ ಹಕ್ಕಿದೆ.

**ಲೈಂಗಿಕ ಶೋಷಣೆ**

ಮಕ್ಕಳನ್ನು ವೇಶ್ಯಾವೃತ್ತಿಗೆ ದೂಡುವ, ಲೈಂಗಿಕ ಸಾಹಿತ್ಯ/ಚಿತ್ರದ ಸೃಷ್ಟಿಗೆ ಬಳಸುವುದು, ಯಾವುದೇ ಲೈಂಗಿಕ ಶೋಷಣೆ ದುರ್ಬಳಕೆಗೆ ಬಳಸುವುದರ ವಿರುದ್ಧ ರಕ್ಷಣೆ ನೀಡುವುದು ಸರ್ಕಾರದ ಕರ್ತವ್ಯ.

**ಮಾರಾಟ, ಅಕ್ರಮ ಸಾಗಣೆ ಹಾಗೂ ಬಂಧನ**

ಮಕ್ಕಳ ಮಾರಾಟ, ಅಕ್ರಮ ಸಾಗಣೆ ಹಾಗೂ ಬಂಧನವಾಗದಂತೆ ರಕ್ಷಣೆ ನೀಡಲು ಎಲ್ಲ ಪ್ರಯತ್ನಗಳನ್ನು ಸರ್ಕಾರ ಮಾಡಬೇಕು.

**ಇನ್ನಿತರ ಶೋಷಣೆಗಳು**

ಈ ಒಡಂಬಡಿಕೆಯಲ್ಲಿ ಹೇಳಿರದ ಯಾವುದೇ ರೀತಿಯ ಇತರ ಶೋಷಣೆಗಳಿಂದಲೂ, ಮಕ್ಕಳ ಅಭಿವೃದ್ಧಿಗೆ ಮಾರಕವಾಗುವ ಯಾವುದೇ ಕ್ರಮಗಳ ವಿರುದ್ಧ ರಕ್ಷಣೆ ಪಡೆಯುವುದು ಮಕ್ಕಳ ಹಕ್ಕು.

**ಹಿಂಸೆ ಮತ್ತು ಸ್ವಾತಂತ್ರ್ಯ ಹರಣ**

ಯಾವುದೇ ಮಗುವನ್ನು ಹಿಂಸೆಗೆ, ಶಿಕ್ಷೆ, ಅನಧಿಕೃತ ಬಂಧನ ಮತ್ತು ಸ್ವಾತಂತ್ರ್ಯ ಹರಣಕ್ಕೆ ಗುರಿಪಡಿಸಲಾಗದು. 18 ವರ್ಷದೊಳಗಿನ ಯಾವುದೇ ಮಗು ಮಾಡಿದ ಯಾವುದೇ ತಪ್ಪಿಗೆ ಮರಣದಂಡನೆ

ಮತ್ತು ಬಿಡುಗಡೆಯ ಸಾಧ್ಯತೆಯೇ ಇಲ್ಲದ ಬಂಧನ/ಸೆರಮನೆ ವಾಸ ವಿಧಿಸಬಾರದು.

ಅಕಸ್ಮಾತ್ ಪ್ರಾಸಂಗಿಕವಾಗಿ ಮಗುವನ್ನು ತಂದೆ ತಾಯಿಯಿಂದ ಬೇರ್ಪಡಿಸಲೇ ಬೇಕಾದಲ್ಲಿ ಅದು ಮಗುವಿನ ಹಿತದೃಷ್ಟಿಯಿಂದಾಗಬೇಕು. ಅಕಸ್ಮಾತ್ ಯಾವುದಾದರೂ ಮಗುವನ್ನು ಸರಕಾರ ತನ್ನ ವಶಕ್ಕೆ ತೆಗೆದುಕೊಂಡಿದ್ದೇ ಆಗಲಿ, ಮಗುವಿಗೆ ಕಾನೂನಿನ ನೆರವು ಪಡೆಯುವ ಹಾಗೂ ಕುಟುಂಬದೊಡನೆ ಸಂಪರ್ಕಹೊಂದಿರುವ ಹಕ್ಕು ಇದೆ.

**ಸಶಸ್ತ್ರ ಸಂಘರ್ಷ**

ಯಾವುದೇ ರೀತಿಯ ಸಶಸ್ತ್ರ ಸಂಘರ್ಷಗಳಲ್ಲಿ 15 ವರ್ಷದೊಳಗಿನ ಯಾವುದೇ ಮಗು ನೇರವಾಗಿ ಭಾಗಿಯಾಗದಂತೆ ಎಲ್ಲರೀತಿಯ ಕ್ರಮಗಳನ್ನು ಕೈಗೊಳ್ಳುವುದು ಸರ್ಕಾರದ ಕರ್ತವ್ಯ. 15 ವರ್ಷದೊಳಗಿನ ಯಾವುದೇ ಮಗುವನ್ನು ಸೈನ್ಯಕ್ಕೆ ಸೇರಿಸಿಕೊಳ್ಳಬಾರದು. ಸಶಸ್ತ್ರ ಸಂಘರ್ಷದಿಂದ ತೊಂದರೆಗೀಡಾದ ಯಾವುದೇ ಮಕ್ಕಳಿಗೆ ಅಂತಾರಾಷ್ಟ್ರೀಯ ಕಾನೂನಿನಲ್ಲಿ ವಿವರಿಸಿರುವಂತೆ ರಕ್ಷಣೆ, ಹಾಗೂ ಆರೈಕೆಗಳನ್ನು ಏರ್ಪಡಿಸಬೇಕು.

**ಪುನರ್ವಸತಿ ಸೇವೆ**

ಸಶಸ್ತ್ರ ಸಂಘರ್ಷ, ಹಿಂಸೆ, ತಿರಸ್ಕಾರ ದುರುಪಯೋಗ, ಅಥವಾ ಶೋಷಣೆಗೆ ಗುರಿಯಾದ ಮಕ್ಕಳಿಗೆ ಸೂಕ್ತವಾದ ಚಿಕಿತ್ಸೆ, ಆರೈಕೆ ನೀಡಿ ಅವರನ್ನು ಸಮಾಜದಲ್ಲಿ ಒಂದಾಗಿಸುವ ಪ್ರಯತ್ನವನ್ನು ಮಾಡುವುದು ಸರ್ಕಾರದ ಜವಾಬ್ದಾರಿ.

**ತಪ್ಪುಮಾಡಿದ ಮಕ್ಕಳಿಗೆ ನ್ಯಾಯ**

ಕಾನೂನಿನೊಡನೆ ಸಂಘರ್ಷಕ್ಕಿಳಿದಿರುವ ಮಕ್ಕಳ ವಯಸ್ಸನ್ನು ಗಮನದಲ್ಲಿಟ್ಟುಕೊಂಡು ಸರಕಾರವು ಅವರ ಘನತೆಗೌರವಗಳಿಗೆ ಧಕ್ಕೆಯಾಗದಂತೆ ನೋಡಿಕೊಂಡು, ಅವರು ಸಮಾಜದಲ್ಲಿ ಮತ್ತೆ ಬೆರೆಯುವಂತಹ ಸಹಾಯ ನೀಡಬೇಕು.

ಮಗುವಿಗೆ ಕಾನೂನಿನ ನೆರವು ನೀಡಿ ತನ್ನ ಪರವಾಗಿ ನ್ಯಾಯಕೇಳಲು ಅವಕಾಶ ಮಾಡಿಕೊಡಬೇಕು. ಎಲ್ಲೆಲ್ಲಿ ಸಾಧ್ಯವೋ ಅಲ್ಲೆಲ್ಲಾ ಮಕ್ಕಳನ್ನು ನ್ಯಾಯಲಯಗಳಿಗೆ ಅಲೆಯುವುದು ಮತ್ತು ಸಂಸ್ಥೆಯಲ್ಲಿ ಇಡುವುದನ್ನು ತಪ್ಪಿಸಬೇಕು.

**ಉನ್ನತ ಮಟ್ಟದ ನ್ಯಾಯ ವ್ಯವಸ್ಥೆ.**

ಯಾವ ದೇಶಗಳಲ್ಲಿ ಈ ಒಡಂಬಡಿಕೆಯಲ್ಲಿ ಹೇಳಿರುವುದಕ್ಕಿಂತಾ ಉನ್ನತ ದರ್ಜೆಯ ಕಾನೂನುಗಳು ಮಕ್ಕಳ ಹಿತಕ್ಕಾಗಿ ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯ ಕಾನೂನು ನಿಯಮಗಳಂತೆ ಇವೆಯೋ ಅಂತಹ ಉನ್ನತ ದರ್ಜೆಯನ್ನು ಕಾಪಾಡಿಕೊಳ್ಳಬೇಕು.

**ಹಕ್ಕುಗಳ ಜಾರಿ ಮತ್ತು ವರದಿ**

ಒಡಂಬಡಿಕೆಯ 42-54ನೇ ಪರಿಚ್ಛೇದಗಳು ಮುಖ್ಯವಾಗಿ ಹೇಳಿರುವುದು ಹೀಗೆ:

1. ಮಕ್ಕಳು ಮತ್ತು ಪ್ರೌಢರು ಇಬ್ಬರಿಗೂ ಈ ಒಡಂಬಡಿಕೆಯ ವಿಚಾರಗಳು ತಿಳಿಯುವಂತಹ ವಿಸ್ತೃತವಾದ ಏರ್ಪಾಡುಗಳನ್ನು ಮಾಡುವುದು ಸರ್ಕಾರದ ಕರ್ತವ್ಯ.

2. ಒಡಂಬಡಿಕೆಗೆ ಸರ್ಕಾರಗಳು ಒಪ್ಪಿ ಸಹಿ ಮಾಡಿ ಎರಡು ವರ್ಷಗಳ ನಂತರ ಹಾಗೂ ಮುಂದೆ ಪ್ರತಿ ಐದು ವರ್ಷಗಳಿಗೊಮ್ಮೆ ನೀಡಬೇಕಾದ ವರದಿಗಳನ್ನು ಪರಿಶೀಲಿಸಲು ಹತ್ತು ಜನರ ಸಮಿತಿಯನ್ನು ನಿರ್ಮಿಸಬೇಕು. ಈ ಒಡಂಬಡಿಕೆ ತಕ್ಷಣ ಜಾರಿಯಾಗುವುದರಿಂದ, ಒಡಂಬಡಿಕೆಯನ್ನು ಕನಿಷ್ಠ 20 ದೇಶಗಳು ಒಪ್ಪಿದ ಕೂಡಲೇ ಈ ಸಮಿತಿಯನ್ನು ನಿರ್ಮಿಸಬೇಕು.

3. ಸರ್ಕಾರಗಳು ತಾವು ವಿಶ್ವಸಂಸ್ಥೆಗೆ ಸಲ್ಲಿಸುವ ವರದಿಯ ಪ್ರತಿಯನ್ನು ನಾಗರೀಕರಿಗೂ ತಲುಪಿಸಬೇಕು.

4. ಮಕ್ಕಳ ಹಕ್ಕುಗಳಿಗೆ ಸಂಬಂಧಿಸಿದಂತೆ ಕೆಲವು ವಿಚಾರಗಳನ್ನು ಕುರಿತು ವಿಶೇಷ ಅಧ್ಯಯನಗಳನ್ನು ನಡೆಸಲು ಈ ಸಮಿತಿ ನಿರ್ಧರಿಸಬಹುದು ಹಾಗೂ ಅದರಲ್ಲಿ ಹೊರ ಹೊಮ್ಮಿದ ವಿಚಾರಗಳನ್ನು ಸದಸ್ಯ ರಾಷ್ಟ್ರಗಳಿಗೆ ಹಾಗೂ ವಿಶ್ವಸಂಸ್ಥೆಯ ಸಾಮಾನ್ಯ ಸಭೆಗೆ ತಲುಪಿಸಬೇಕು.

5. 'ಮಕ್ಕಳ ಹಕ್ಕುಗಳ ಒಡಂಬಡಿಕೆ'ಯ ಪರಿಣಾಮಕಾರಿ ಜಾರಿ ಹಾಗೂ ಅಂತಾರಾಷ್ಟ್ರಿಯ ಸಹಕಾರವನ್ನು ಪ್ರೋತ್ಸಾಹಿಸಲು ವಿಶ್ವ ಸಂಸ್ಥೆಯ ವಿಶೇಷ ಸಂಸ್ಥೆಗಳಾದ, ಅಂತಾರಾಷ್ಟ್ರೀಯ ಕಾರ್ಮಿಕ ಸಂಘ (ಐ.ಎಲ್.ಓ); ಜಾಗತಿಕ ಆರೋಗ್ಯ ಸಂಸ್ಥೆ (ಡಬ್ಲ್ಯು.ಎಚ್.ಓ) ಮತ್ತು ವಿಶ್ವ ಸಂಸ್ಥೆಯ ಶಿಕ್ಷಣ, ವಿಜ್ಞಾನ ಮತ್ತು ಸಾಂಸ್ಕೃತಿಕ ಸಂಘಟನೆ (ಯುನೆಸ್ಕೋ) ಮತ್ತು ಯೂನಿಸೆಫ್‌ಗೆ ಸಮಿತಿಯ ಸಭೆಗಳಲ್ಲಿ ಭಾಗವಹಿಸಲು ವಿಶೇಷ ಆಹ್ವಾನವಿರುತ್ತದೆ. ವಿಶ್ವಸಂಸ್ಥೆಯೊಡನೆ ಸಂಪರ್ಕ, ಒಪ್ಪಿಗೆ ಪಡೆದು ಸ್ವಯಂ ಸೇವಾ ಸಂಘಟನೆಗಳನ್ನು ಒಳಗೊಂಡಂತಹ, ಅರ್ಹ ಸಂಸ್ಥೆಗಳು ಹಾಗೂ ವಿಶ್ವಸಂಸ್ಥೆಯ ಅಂಗ ಸಂಸ್ಥೆಗಳಾದ ನಿರಾಶ್ರಿತರನ್ನು ಕುರಿತು ವಿಶ್ವಸಂಸ್ಥೆಯ ಉನ್ನತ ಕಮಿಷನ್ (ಯು.ಎನ್.ಎಚ್.ಸಿ.ಆರ್) ಈ ಸಮಿತಿಗೆ ಕೆಲವು ನಿರ್ದಿಷ್ಟ ವಿಚಾರಗಳನ್ನು ಕುರಿತು ವರದಿಸಲ್ಲಿಸಿ, ಒಡಂಬಡಿಕೆಯನ್ನು ಗರಿಷ್ಟಪ್ರಮಾಣದಲ್ಲಿ ಜಾರಿ ಮಾಡಲು ಸಲಹೆ ನೀಡಬಹುದು.

**ಅನುವಾದ - ಎನ್. ಲಕ್ಷ್ಮಿ**

## ಮಾಧ್ಯಮ್‌ನ ಧ್ಯೇಯವಾಕ್ಯ

ಬದಲಾವಣೆ ಅತ್ಯಾವಶ್ಯಕ ಮತ್ತು ಎಲ್ಲ ಸಾಮಾಜಿಕ ಹಂತಗಳಲ್ಲೂ ಈ ಬದಲಾವಣೆ ಸಾಧ್ಯ, ಹಾಗೂ ಪರ್ಯಾಯ ಮತ್ತು ಮುಖ್ಯವಾಹಿನಿ ಮಾಧ್ಯಮಗಳು ಇದನ್ನು ಸಾಧ್ಯವಾಗಿಸಬಲ್ಲ ಶಕ್ತಿಯುತ ಸಾಧನಗಳು ಎಂದು ಮಾಧ್ಯಮ್ ನಂಬುತ್ತದೆ.

**ಮಾಧ್ಯಮದ ಕೆಲಸಗಳು:**

- ಜನಕೇಂದ್ರಿತ ಭಾಗವಹಿಸುವಿಕೆ ಆಧಾರಿತ ಸಂವಹನವನ್ನು ಸೃಷ್ಟಿಸುವುದು.
- ಮಹಿಳೆಯರು, ಮಕ್ಕಳು, ಜಾನಪದ ಕಲಾವಿದರು ಮತ್ತು ಮೂಲೆಗುಂಪಾಗಿರುವವರ ಆಸೆ ಆಶೋತ್ತರಗಳು, ನೋವುಗಳನ್ನು ಪ್ರತಿಬಿಂಬಿಸುವುದು.
- ಜನಪದ ಕಲೆ (ಸಾಂಸ್ಕೃತಿಕ ಕ್ರಿಯೆ) ಹಾಗೂ ಮುಖ್ಯವಾಹಿನಿಯ ಮೂಲಕ ಸಾಮಾಜಿಕ ವಿಚಾರಗತಳ ಬಗ್ಗೆ ಸ್ವಭಾವ ಹಾಗೂ ಧೋರಣೆಗಳಲ್ಲಿ ಬದಲಾವಣೆ ತರುವುದು.
- ಸಮ ಸಮಾಜದ ಹಾಗೂ ನ್ಯಾಯಬದ್ಧ ಮಾನವೀಯ ಸಮಾಜದ ನಿರ್ಮಾಣದಲ್ಲಿ ತೊಡಗುವುದು.




**ಬೆಲೆ : ರೂ. 20/-**

ಕರ್ನಾಟಕದ ಎಲ್ಲ ಪ್ರಮುಖ ಸಂಗೀತ ಸುರಳಿ ಅಂಗಡಿಗಳು ಮತ್ತು ಮಾಧ್ಯಮ್‌ನಲ್ಲಿ ಈ ಧ್ವನಿಸುರಳಿ ಲಭ್ಯವಿದೆ.

**ಧ್ವನಿ ಸುರುಳಿ**

### ಹಕ್ಕಿನ ಹಾಡು

ಮಕ್ಕಳ ಹಕ್ಕುಗಳನ್ನು ಎಲ್ಲೆಡೆಗೆ ತಲುಪಿಸಲು ಯೋಜಿಸಿರುವ ಈ ಧ್ವನಿಸುರುಳಿಯಲ್ಲಿ, ಮಕ್ಕಳ ಹಕ್ಕುಗಳ ವಿವಿಧ ಆಯಾಮಗಳ ಬಗ್ಗೆ ಪ್ರಶ್ನೆ, ವಿವರಣೆ, ಸಂದೇಹ, ಪರಿಹಾರಗಳು ಇವೆ. ಕನ್ನಡದ ಖ್ಯಾತ ಸಂಗೀತ ನಿರ್ದೇಶಕರಾದ ಹಂಸಲೇಖ ಇಲ್ಲಿನ ಹಾಡುಗಳಿಗೆ ಸಂಗೀತ ನಿರ್ದೇಶನ ಮಾಡಿ ಮಕ್ಕಳೊಂದಿಗೆ ಹಾಡಿದ್ದಾರೆ. ಇದು ಲಹರಿ ಕಂಪನಿಯೊಡನೆಯ ಸಹ ಪ್ರಯೋಗ.

ಭಾಷೆ : ಕನ್ನಡ

ಮಕ್ಕಳ ಹಕ್ಕುಗಳು, ಭಾವೈಕ್ಯತೆ, ಶಿಕ್ಷಣದ ಪ್ರಾಮುಖ್ಯತೆ ಹಾಗೂ ಮಕ್ಕಳ ಕನಸುಗಳು ವ್ಯಕ್ತವಾಗಿರುವ ಈ ಧ್ವನಿಸುರಳಿ ಕರ್ನಾಟಕದ ಜನತೆಗೆ ಹಾಗೂ ಮಕ್ಕಳಿಂದ ಮಕ್ಕಳಿಗೆ ಉಡುಗೊರೆಯಾಗಿದೆ.

***– ಉದಯವಾಣಿ, 13.5.2002***

ಮಕ್ಕಳ ಹಕ್ಕುಗಳ ಸಂದೇಶ ಕರ್ನಾಟಕದೆಲ್ಲೆಡೆ ಹಬ್ಬಲಿ ಎಂಬುದೇ ಈ ಧ್ವನಿಸುರಳಿಯ ಮಹದಾಸೆ.

***– ವಿಜಯ ಕರ್ನಾಟಕ, 10.5.2002***

# ಮಾಧ್ಯಮ್‌ನ ಕೆಲವು ಪ್ರಕಟನೆಗಳು

**ವಿಡಿಯೋ ಚಿತ್ರಗಳು**

**ಮಕ್ಕಳ ಹಕ್ಕುಗಳು**

ಇಂಗ್ಲಿಷ್ ಹಾಗೂ ಹಿಂದಿಯಲ್ಲಿ ಚಲನಚಿತ್ರ ತಾರೆ ನಂದಿತಾದಾಸ್ ಹಾಗೂ ಕನ್ನಡದಲ್ಲಿ ಚಲನಚಿತ್ರತಾರೆ ಸುಧಾರಾಣಿ ವಿಚಾರಗಳನ್ನು ಮಂಡಿಸಿರುವ ಶಿಕ್ಷಣದ ಹಕ್ಕು ಕುರಿತು ಮೂವತ್ತು ಸೆಕೆಂಡುಗಳ ಮೂರು ಜಾಹೀರಾತು ಚಿತ್ರಗಳು.

ಬೆಲೆ. ರೂ.100/-

**ಗಿರಿಜಾ**

ಜಾನಪದ ಕತೆ, ಹಾಡು ಹಾಗೂ ವಿಧಾನವನ್ನು ಬಳಸಿ ಹೆಣ್ಣು ಮಕ್ಕಳನ್ನು ಕುರಿತು ಕಿರು ಚಿತ್ರ. ಹೆಣ್ಣು ಮಕ್ಕಳ ಸಾಮರ್ಥ್ಯವನ್ನು ಪ್ರತಿಬಿಂಬಿಸುವ ಈ ಚಿತ್ರ ಜೊತೆಜೊತೆಯಲ್ಲೇ ಹೆಣ್ಣು ಮಕ್ಕಳ ಇಂದಿನ ಋಣಾತ್ಮಕ ಬದುಕನ್ನು ತೆರೆದಿಡುತ್ತದೆ.

ಕಾಲಾವಧಿ : 30 ನಿಮಿಷಗಳು

ಬೆಲೆ : ರೂ. 250/-

ಭಾಷೆಗಳು : ಕನ್ನಡ, ತಮಿಳು, ತೆಲುಗು ಮತ್ತು ಹಿಂದಿ ಇಂಗ್ಲಿಷ್‌ನಲ್ಲಿ ಉಪ ಶೀರ್ಷಿಕೆಗಳಿವೆ.

**ಇಲಯಂ ಮುಲ್ಲಂ**

ಮಾಧ್ಯಮ್ - ಆಲ್ಕಾಂನ ನಿರ್ಮಾಣ. ಮಹಿಳೆಯರ ಮೇಲೆ ಆಗುವ ಹಿಂಸೆ /ಕ್ರೌರ್ಯ ಕುರಿತು ನಿರ್ಮಿಸಿರುವ ಈ ಕಥಾಚಿತ್ರಕ್ಕೆ ಫ್ರಾನ್ಸ್‌ನಲ್ಲಿ ನಡೆದ ಅಂತಾರಾಷ್ಟ್ರೀಯ ಗ್ರಾಮೀಣ ಚಲನಚಿತ್ರ ಉತ್ಸವದಲ್ಲಿ ಗ್ರ್ಯಾಂಡ್ ಪ್ರಿಕ್ಸ್ ಪ್ರಶಸ್ತಿ ಬಂದಿದೆ. ಭಾರತೀಯ ಪನೋರಮಾ ಒಳಗೊಂಡಂತೆ ಜಗತ್ತಿನ 14 ಚಲನ ಚಿತ್ರೋತ್ಸವಗಳಿಗೆ ಈ ಚಿತ್ರವು ಆಯ್ಕೆ ಆಗಿತ್ತು.

ಕಾಲಾವಧಿ : 90 ನಿಮಿಷಗಳು

ಬೆಲೆ : ರೂ. 400/-

ಭಾಷೆಗಳು : ಮಲಯಾಳಂ, ತಮಿಳು, ತೆಲುಗು ಮತ್ತು ಹಿಂದಿ. ಇಂಗ್ಲಿಷ್‌ನಲ್ಲಿ ಉಪಶೀರ್ಷಿಕೆಗಳಿವೆ.

**ನನ್ನ ಮಗ**

ಬೀಜಿಂಗ್‌ನಲ್ಲಿ ನಡೆದ ವಿಶ್ವ ಸಂಸ್ಥೆಯ ನಾಲ್ಕನೇ ಜಾಗತಿಕ ಮಹಿಳಾ ಸಮ್ಮೇಳನದ ಸಮಯದಲ್ಲಿ ಈ ಐದು ನಿಮಿಷಗಳ ಚಲನಚಿತ್ರ ಪ್ರಸಾರವಾಗಿತ್ತು, ಪ್ರಥಮ ಜಾಗತಿಕ ಮಹಿಳಾ ಸಹ. ನಿರ್ಮಾಣದ ಈ ಚಿತ್ರವನ್ನು ಮಾಧ್ಯಮ್ ನಿರ್ಮಿಸಿದೆ. 1995ರಲ್ಲಿ ನಿರ್ಮಾಣವಾದ ಅತ್ಯುತ್ತಮ ವಿಡಿಯೋ/ಟಿ.ವಿ. ಚಿತ್ರಗಳಿಗಿದ್ದ ಸಂದೇಶ್ ಮೀಡಿಯಾ ಪ್ರಶಸ್ತಿ ಈ ಚಲನಚಿತ್ರಕ್ಕೆ ಸಂದಿದೆ.

ಕಾಲಾವಧಿ : 5 ನಿಮಿಷ

ಬೆಲೆ : ರೂ. 120/-

ಭಾಷೆಗಳು : ಕನ್ನಡ ಮತ್ತು ಇಂಗ್ಲಿಷ್

**ವಿಶಾಲವಾದ ಬಯಲಿನಲ್ಲಿ ಸ್ವತಂತ್ರವಾಗಿ ನನ್ನ ಮಕ್ಕಳು ವಿಹರಿಸಬೇಕಿತ್ತು.**

**(My Children Who Should Be Running Freely Through The Vast Open Spaces)**

ಇದೇ ಹೆಸರಿನ ನಾಟಕದ ದೃಶ್ಯವನ್ನು ಒಳಗೊಂಡಿರುವ ಈ ಚಲನಚಿತ್ರ ಮಕ್ಕಳ ಲೈಂಗಿಕ ದುರುಪಯೋಗ ಕುರಿತ್ತದ್ದಾಗಿದೆ. ಈ ವಿಚಾರವನ್ನು ಕುರಿತು ಹಲವಾರು ಆಯಾಮಗಳಲ್ಲಿ ಪರೀಕ್ಷಿಸಲೆತ್ನಿಸುವ ಈ ಚಿತ್ರದಲ್ಲಿ ಮಕ್ಕಳು, ಸ್ವಯಂ ಸೇವಾ ಸಂಘಗಳ ಕಾರ್ಯಕರ್ತರು, ಮನಃಶಾಸ್ತ್ರಜ್ಞರು, ಪೋಲಿಸ್ ಅಧಿಕಾರಿಗಳು, ನ್ಯಾಯಾಧೀಶರೇ ಮೊದಲಾದ ಸಮಾಜದ ವಿವಿಧ ವರ್ಗಗಳ ಜನರೊಂದಿಗೆ ಸಂದರ್ಶನ, ಅಭಿಪ್ರಾಯ ಸಂಗ್ರಹವೂ ಇದೆ. ನಮ್ಮ ಸಮಾಜದ ಆರ್ಥಿಕ ಹಾಗೂ ಸಾಂಸ್ಕೃತಿಕ ರಂಗಗಳ ವಿವಿಧ ಸ್ತರಗಳಲ್ಲಿ ಮಕ್ಕಳ ಲೈಂಗಿಕ ದುರುಪಯೋಗ ಕುರಿತು ಈ ಚಿತ್ರ ಗಮನ ಸೆಳೆಯುತ್ತದೆ.

ಕಾಲಾವಧಿ : 50 ನಿಮಿಷ

ಬೆಲೆ : ರೂ 500/-

ಭಾಷೆ : ಇಂಗ್ಲೀಷ್

**ಒಂದು ಕಿರಣವನರಸುತ್ತಾ**

ವರದಕ್ಷಿಣೆ ಹಿಂಸೆಯ ಸುತ್ತಾ ಈ ಚಿತ್ರ ನಡೆಯುತ್ತದೆ. ವರದಕ್ಷಿಣೆಗೆ ಬಲಿಯಾಗುವ ಒಬ್ಬಳು ಹಾಗೂ ಅದರ ವಿರುದ್ಧ ಹೋರಾಡುವ ಇನ್ನೊಬ್ಬ ಹೆಂಗಸರ ಪ್ರಕರಣಗಳನ್ನಿಟ್ಟುಕೊಂಡು ಸಮಾಜದ ಮೌಲ್ಯಗಳನ್ನು ಪ್ರಶ್ನಿಸುವ ಪ್ರಯತ್ನ ಇದಾಗಿದೆ.

ಕಾಲಾವಧಿ : 22 ನಿಮಿಷ

ಬೆಲೆ : ರೂ.300/-

ಭಾಷೆಗಳು : ಹಿಂದಿ, ಕನ್ನಡ, ಇಂಗ್ಲಿಷ್

**ಸ್ಟಿಕ್ಕರ್ಸ್:**

ಮಕ್ಕಳ ಹಕ್ಕುಗಳು

ರೂ.2/-

**ಭಿತ್ತಿ ಚಿತ್ರಗಳು**

ಇಸ್ಲಾಂ, ಕ್ರಿಶ್ಚಿಯನ್ ಹಾಗೂ ಹಿಂದೂ ಧರ್ಮದಲ್ಲಿ ಮಹಿಳೆಯರಿಗೆ ನೀಡಿರುವ ಉತ್ತಮ ಸ್ಥಾನಮಾನ, ಅವರ ಶಕ್ತಿಯನ್ನು ಎತ್ತಿ ತೋರುವ ಮೂರು ಭಿತ್ತಿಚಿತ್ರಗಳ ಮಾಲೆ.

ಬೆಲೆ : ರೂ .30/- (ಮೂರು ಭಿತ್ತಿ ಚಿತ್ರಗಳು)

ಭಾಷೆ : ಕನ್ನಡ




ಮಕ್ಕಳು ಮಕ್ಕಳ ಹಕ್ಕುಗಳನ್ನು ಅರ್ಥಮಾಡಿಕೊಂಡು ಹೇಳುವಂತೆ ರಚಿಸಲಾಗಿರುವ ಹೊಳಪಾದ ಕಾಗದದ ಮೇಲೆ ಮುದ್ರಿತವಾಗಿರುವ ವರ್ಣಮಯ ಭಿತ್ತಚಿತ್ರ. ವಿವಿಧ ಭಾಷೆಗಳಲ್ಲಿ ವಿವಿಧ ಗಾತ್ರಗಳಲ್ಲಿ ಇದು ಲಭ್ಯ.

ಬೆಲೆ : ರೂ.25/- ದೊಡ್ಡದು, ರೂ.15/- ಚಿಕ್ಕದು.

ಭಾಷೆ : ಇಂಗ್ಲಿಷ್, ಕನ್ನಡ, ತಮಿಳು, ತೆಲುಗು ಹಾಗೂ ಹಿಂದಿ.

ಎಚ್.ಐ.ವಿ./ಏಡ್ಸ್ ಕುರಿತು ಅರಿವು ಮೂಡಿಸುವ ವರ್ಣಮಯ ಭಿತ್ತಿಚಿತ್ರ. ಏಡ್ಸ್ ಕುರಿತು ಅರಿವು ಮೂಡಿಸಲು ಎಲ್ಲಡೆ ಬಳಕೆಯಾಗುತ್ತಿರುವ ಕೆಂಪು ಪಟ್ಟಿಯನ್ನು ಇಲ್ಲಿ ಒಂದು ಪಾತ್ರವಾಗಿ ತೋರಿಸಲಾಗಿದೆ.

ಬೆಲೆ : ರೂ.10/-

ಭಾಷೆ : ಇಂಗ್ಲಿಷ್ ಹಾಗೂ ಕನ್ನಡ

**ಮಾಧ್ಯಮ್ ಪತ್ರಿಕೆ. (ಇಂಗ್ಲಿಷ್‌ನಲ್ಲಿ ಮಾತ್ರ)**

**ಹಿಂದಿನ ಸಂಚಿಕೆಗಳು**

| | |
|---|---|
| Communicating Grassroot Women's Concerns | Rs.25.00 |
| Folk Art and People's Expression | Rs.25.00 |
| Media Policy and Nation Building | Rs.25.00 |
| Communication For Peace and Justice-Challenge In Facing A Violent World | Rs.30.00 |
| Networking-A Development Mantra Or Hope for the Future? | Rs.30.00 |
| Globalisation, Media and its Impact on society | Rs.30.00 |
| Democracy-Experience & Experiments | Rs.30.00 |
| Rights Of the Child Part I and II | Rs.35.00 |
| Rights to Information | Rs.35.00 |
| Folk Art and Cultural Diversity | Rs.50.00 |
| Aids - Men make a Difference | Rs.50.00 |
| Corporate Social Responsibility | Rs.50.00 |
| Intellectual Property Rights | Rs.50.00 |
| ಮಾಧ್ಯಮ್ ಪತ್ರಿಕೆಯ ಆಯ್ದ ವಿಶೇಷ ಲೇಖನಗಳು | Rs.50.00 |

**ಧ್ವನಿ ಸುರುಳಿ.**

**ಹಕ್ಕಿನ ಹಾಡು**

ಮಕ್ಕಳ ಹಕ್ಕುಗಳನ್ನು ಎಲ್ಲೆಡೆಗೆ ತಲುಪಿಸಲು ಯೋಜಿಸಿರುವ ಈ ಧ್ವನಿಸುರುಳಿಯಲ್ಲಿ, ಮಕ್ಕಳ ಹಕ್ಕುಗಳ ವಿವಿಧ ಆಯಾಮಗಳ ಬಗ್ಗೆ ಪ್ರಶ್ನೆ, ವಿವರಣೆ, ಸಂದೇಹ, ಪರಿಹಾರಗಳು ಇವೆ. ಕನ್ನಡದ ಖ್ಯಾತ ಸಂಗೀತ ನಿರ್ದೇಶಕರಾದ ಹಂಸಲೇಖ ಇಲ್ಲಿನ ಹಾಡುಗಳಿಗೆ ಸಂಗೀತ ನಿರ್ದೇಶನ ಮಾಡಿ ಮಕ್ಕಳೊಂದಿಗೆ ಹಾಡಿದ್ದಾರೆ. ಇದು ಲಹರಿ ಕಂಪನಿಯೊಡನೆಯ ಸಹ ಪ್ರಯೋಗ.

**15/1, Clarke Road, Richards Town ,**
**(Opp. Richards Park Main Entrance)**
**Bangalore-560 005**
**Tel. No. 25497356, 25497358**
**E-mail : madhyamb@vnsl.com**
**www : madhyam.info**